# ಮೈಸೂರ ಮಾರಾಟಕರ ಕಾಯ್ದೆ, ೧೯೫೭

# ಕೈಪಿಡಿ

★


ಲೇಖಕರು:-

ಜಿ. ಸಿ. ಬೋಳಮಲ್ಲ, ಬಿ. ಎ., ಎಲ್ಎಲ್. ಬಿ., ವಕೀಲ, ಬೆಳಗಾಂವಿ.

ಮತ್ತು

ಎನ್. ಸಿ. ಪಾಟೀಲ, ಬಿ. ಎ. ( ಆನರ್ಸ ). ಬಿ. ಕಾಮ, ಬೆಳಗಾಂವಿ.


★



ಒಂದು ರೂಪಾಯಿ.



# ಮೈಸೂರ ಮಾರಾಟಕರ ಕಾಯ್ದೆ, ೧೯೫೭

## ಕೈಪಿಡಿ




ಲೇಖಕರು :-

ಜಿ. ಸಿ. ಬೋಳಮಲ್, ಬಿ. ಎ., ಎಲ್ಎಲ್. ಬಿ., ವಕೀಲ, ಬೆಳಗಾಂವಿ.

ಮತ್ತು

ಎನ್. ಸಿ. ಪಾಟೀಲ, ಬಿ. ಎ. ( ಆನರ್ಸ ), ಬಿ. ಕಾಮ್, ಬೆಳಗಾಂವಿ.





೧೯೫೮ ಒಂದು ರೂಪಾಯಿ.

ಪ್ರಕಾಶಕರು:-
ಎನ್. ಸಿ. ಪಾಟೀಲ,
ಫೋರ್ಟರೋಡ, ಬೆಳಗಾಂವಿ.



ಮೊದಲ ಮುದ್ರಣ, ೧೯೫೮
೨೫೦೦ ಪ್ರತಿಗಳು.


ಮುದ್ರಕರು:
ಡಿ. ಎಸ್. ಕಬಾಡಗಿ,
ಮ್ಯಾನೇಜರ,
ದಿ ವಿಶ್ವಭಾರತ ಪ್ರಿಂಟಿಂಗ ಆ್ಯಂಡ ಪಬ್ಲಿಶಿಂಗ ಕಂಪನಿ, ಲಿಮಿಟೆಡ್,
ಬೆಳಗಾಂವಿ.

# ಮುನ್ನುಡಿ:

ಮಾರಾಟಕರ ಕಾಯ್ದೆಯ ಬೇಗೆ ತಗಲದ ವ್ಯಕ್ತಿಯಿಲ್ಲವೆಂದರೂ ಅಡ್ಡಿಯಿಲ್ಲ. ಯಾಕಂದರೆ ವಸ್ತುಗಳನ್ನು ಕೊಳ್ಳುವ ಇಲ್ಲವೆ ಮಾರುವ ಪ್ರತಿಯೊಬ್ಬನಿಗೂ ತಾನು ಕರ ಕೊಡಬೇಕಾಗುವದೋ ಇಲ್ಲವೋ ಎನ್ನುವದನ್ನು ಅರಿಯಲೇಬೇಕು. ಈ ಕ್ರಯವಿಕ್ರಯದ ವ್ಯವಹಾರದಿಂದ ವಿರಕ್ತನಾದ ಸನ್ಯಾಸಿಯು ಸಹ ಪಾರಾಗಲಾರನು ಇಂಥ ವಿಷಯದ ಮೇಲೆ ಜ್ಞಾನವನ್ನು ಪಸರಿಸುವ ಪುಸ್ತಕದ ಬಗ್ಗೆ ಹೆಚ್ಚೇನೂ ಹೇಳಬೇಕಾಗಿಲ್ಲ. ಶ್ರೀಮಾನ್ ಬೋಳಮಲ್ಲಿ ಹಾಗೂ ಪಾಟೀಲರು ಈ ಚಿಕ್ಕ ಹೊತ್ತಿಗೆಯನ್ನು ಯುಕ್ತ ಕಾಲದಲ್ಲಿ ಹೊರಡಿಸಿ ಜನತೆಗೆ ಬಹಳ ಅನುಕೂಲತೆಯನ್ನು ಒದಗಿಸಿದ್ದಾರೆ.

ಸರಕಾರೀ ಭಾಷಾಂತರಗಳು, ಕಾಯ್ದೆಯು ಪಾಸಾದ ಕೂಡಲೇ ಕೆಲವೊಮ್ಮೆ ಹೊರಡುವವು. ಆದರೆ ಸಾಧಾರಣ ಮನುಷ್ಯನಿಗೆ ಪಾರಿಭಾಷಿಕ ಶಬ್ದಗಳ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವಿರುವದಿಲ್ಲ. ಅಂಥವನಿಗೆ ತಿಳಿಯುವ ಮನೆ ಮಾತಿನಲ್ಲಿ ಕಾಯ್ದೆಯ ಮುಖ್ಯಾಂಶಗಳ ಅರಿವು ಮಾಡಿಕೊಡಲು ಈ ಹೊತ್ತಿಗೆಯು ವಿಶೇಷ ಪ್ರಯೋಜನಕಾರಿಯಾಗುವದೆನ್ನುವದರಲ್ಲಿ ಸಂದೇಹವಿಲ್ಲ. ಗ್ರಂಥಕರ್ತರು ಪ್ರೌಢ ಸಂಸ್ಕೃತ ಶಬ್ದಗಳ ವ್ಯಾಮೋಹಕ್ಕೆ ಬಲಿಬೀಳದೆ, ಜನರಲ್ಲಿ ಬಳಕೆಯಲ್ಲಿರುವ ಶಬ್ದಗಳನ್ನೇ ಉಪಯೋಗಿಸಿ, ಪುಸ್ತಕದ ಉಪಯುಕ್ತತೆಯನ್ನು ಹೆಚ್ಚಿಸಿದ್ದಾರೆ. ತಮ್ಮ ಓದುಗರ ತಿಳುವಳಿಕೆಯ ಮಟ್ಟವನ್ನು ಲಕ್ಷದಲ್ಲಿಟ್ಟುಕೊಂಡು ಪಾಂಡಿತ್ಯದ ಸೂಕ್ಷ್ಮ, ಶುಷ್ಕ (?) ಚರ್ಚೆಗಳಿಗೆ ಅವಕಾಶಕೊಟ್ಟಿಲ್ಲವೆನ್ನುವದು ಸಂತೋಷದ ಮಾತು. ಇಂಥ ಸುಲಭ ಭಾಷೆಯ ಕಾಯ್ದೆಯ ಪುಸ್ತಕಗಳು ಕನ್ನಡದಲ್ಲಿ ಧಾರಾಳವಾಗಿ ಹೊರಡಲೆಂದು ಹಾರೈಸುತ್ತೇನೆ. ಗ್ರಂಥಕರ್ತೃಗಳ ಪ್ರಯತ್ನವು ತುಂಬ ಶ್ಲಾಘನೀಯವಿರುತ್ತದೆ.

ಟಿಳಕವಾಡಿ,
೩೦ ನೇ ಜನೆವರಿ ೧೯೫೮.

ಪಿ. ಆರ್. ಭಟ್ಟ,
M. A., LL. M.
ಪ್ರಿನ್ಸಿಪಾಲ, ಆರ್. ಎಲ್. ಲಾ. ಕಾಲೇಜ,
ಟಿಳಕವಾಡಿ, ಬೆಳಗಾಂವಿ.

# ನಮ್ಮ ನುಡಿ.

ಮೈಸೂರು ಮಾರಾಟ ಕರ ಕಾಯ್ದೆ, ೧೯೫೭ ರ ನಿಯಮ ಹಾಗೂ ತತ್ಸಂಬಂಧ ಅಧಿನಿಯಮಗಳನ್ನು ಸಂದರ್ಭೋಚಿತವಾಗಿ ಹೊಂದಿಸಿಕೊಂಡು ವ್ಯಾಪಾರಸ್ಥರಿಗೆ ಅನುಕೂಲವಾಗುವ ರೀತಿಯಲ್ಲಿ ಈ ಚಿಕ್ಕ ಹೊತ್ತಿಗೆಯನ್ನು ಬರೆಯಲಾಗಿದೆ. ಈ ಹೊತ್ತಿಗೆಯಲ್ಲಿ ಎಲ್ಲ ಬಗೆಯ ವ್ಯಾಪಾರಸ್ಥರಿಗೆ ನಿತ್ಯ ವ್ಯವಹಾರದಲ್ಲಿ ಆವಶ್ಯಕವಿರುವ ವಿಷಯಗಳನ್ನೆಲ್ಲ ಸಮಾವೇಶಗೊಳಿಸಲು ಆದಷ್ಟು ಮಟ್ಟಿಗೆ ಪ್ರಯತ್ನಿಸಲಾಗಿದೆ ಅಧಿಕಾರಿಗಳಿಗೂ ಮತ್ತು ವ್ಯಾಪಾರಸ್ಥರಿಗೂ ಸಂಬಂಧವಿರುವ ಮಟ್ಟಿಗೆ ಮಾತ್ರ ಆ ಸಂಬಂಧದ ಕಲಮು-ನಿಯಮುಗಳನ್ನು ವಿವರಿಸಲಾಗಿದೆ. ಪುಸ್ತಕದ ಕೊನೆಯಲ್ಲಿ ಕೊಟ್ಟ ಪರಿಶಿಷ್ಟ, ಫಾರ್ಮುಗಳ ನಮೂನೆಗಳು ಹಾಗೂ ಲೆಕ್ಕವನ್ನಿಡುವ ರಜಿಸ್ಟರುಗಳ ನಮೂನೆಗಳು ವ್ಯಾಪಾರಸ್ಥರ ನಿತ್ಯ ವ್ಯವಹಾರದಲ್ಲಿ ಉಪಯುಕ್ತವಾಗುವವೆಂದು ಹಾರೈಸುತ್ತೇವೆ.

ಈ ಚಿಕ್ಕ ಹೊತ್ತಿಗೆಯು ನಮ್ಮ ಎಣಿಕೆಯಂತೆ ವ್ಯಾಪಾರಸ್ಥರಿಗೆ ಪ್ರಯೋಜನಕಾರಿಯಾಗಿ ಅವರು ಕೊಡಕೊಳ್ಳುವ ವ್ಯವಹಾರದಲ್ಲಿ ಕರಗಳನ್ನು ಕೊಡಬೇಕಾಗುವ ಸಂದರ್ಭಗಳನ್ನು ಸ್ಪಷ್ಟವಾಗಿ ತಿಳಿಸಿಕೊಟ್ಟು, ಅವರ ಅಡೆತಡೆಗಳನ್ನು ನಿವಾರಿಸುವಂತಾದರೆ ನಮ್ಮ ಶ್ರಮವು ಸಾರ್ಥಕವಾಯಿತೆಂದು ತಿಳಿಯುತ್ತೇವೆ.

ನಮ್ಮ ಬಿನ್ನಹವನ್ನು ಮನ್ನಿಸಿ ಅಮೂಲ್ಯವಾದ ಮುನ್ನುಡಿಯನ್ನು ಬರೆದುದರ ಸಲುವಾಗಿ **ಶ್ರೀ. ವ್ಹಿ. ಆರ್. ಭಟ್ಟ,** ಎಮ್. ಎ., ಎಲ್‌ಎಲ್. ಎಮ್., ಪ್ರಿನ್ಸಿಪಾಲ, ಆರ್. ಎಲ್. ಲಾ ಕಾಲೇಜ ಬೆಳಗಾಂವಿ, ಇವರಿಗೆ ನಾವು ತುಂಬಾ ಆಭಾರಿಯಾಗಿರುವೆವು.

ಕೊನೆಯದಾಗಿ ಈ ಹೊತ್ತಿಗೆಯನ್ನು ಸಕಾಲಕ್ಕೆ ಅಂದವಾಗಿ ಮುದ್ರಿಸಿ ಕೊಟ್ಟ ವಿಶ್ವಭಾರತ ಮುದ್ರಣಾಲಯದ ಮ್ಯಾನೇಜರಾದ ಶ್ರೀ. ಡಿ. ಎಸ್. ಕಬಾಡಗಿ ಇವರಿಗೂ ತುಂಬಾ ಕೃತಜ್ಞರಾಗಿರುವೆವು.

**ಬೆಳಗಾಂವಿ,**
ತಾ. ೨೦-೧-೧೯೫೮.

**ಜಿ. ಸಿ. ಬೋಳಮಲ್ಲ.**
**ಎನ್. ಸಿ. ಪಾಟೀಲ.**

# ಪರಿವಿಡಿ.

ಪುಟ.

# ಪ್ರಸ್ತಾವನೆ.

## ೧. ಮೈಸೂರ ಮಾರಾಟಕರ ಕಾಯ್ದೆ ನಂಬರ ೨೫/೧೯೫೭

ನವ ಮೈಸೂರ ರಾಜ್ಯದಲ್ಲಿ ಈ ಕಾಯ್ದೆಯು ತಾ. ೧-೧೦-೧೯೫೭ ರಿಂದ ಜಾರಿಯಲ್ಲಿ ಬಂದಿರುತ್ತದೆ. ಇದಕ್ಕೂ ಪೂರ್ವದಲ್ಲಿ ೧-೧೧-೧೯೫೬ ರ ನಂತರ ರಾಜ್ಯ ಪುನರ್ಘಟನೆಯಾದಂದಿನಿಂದ ಇಲ್ಲಿಯವರೆಗೆ ನವ ಮೈಸೂರ ರಾಜ್ಯದಲ್ಲಿ ಮುಂಬಯಿ, ಹೈದರಾಬಾದ, ಮೈಸೂರ ಮತ್ತು ಮದ್ರಾಸ ರಾಜ್ಯಗಳ ನಾಲ್ಕು ಬೇರೆ ಬೇರೆ ಪದ್ಧತಿಯ ಮಾರಾಟಕರ ಕಾಯ್ದೆಗಳು ಪ್ರಚಲಿತವಿದ್ದವು. ರಾಜ್ಯ ಪುನರ್ಘಟನೆಯ ನಂತರ ನವ ಮೈಸೂರ ರಾಜ್ಯದ ಆಯಾ ಭಾಗಗಳಲ್ಲಿ ಆಯಾ ರಾಜ್ಯಗಳ ಪೂರ್ವದ ಕಾಯ್ದೆಗಳು ಜಾರಿಯಲ್ಲಿದ್ದವು. ೧೯೫೬ ರ ರಾಜ್ಯ ಪುನರ್ಘಟನೆಯ ಕಾಯ್ದೆಯ ೧೧೯ ನೇ ಕಲಮಿನ ಪ್ರಕಾರ ಬೇರೆ ಬೇರೆ ಭಾಗಗಳಲ್ಲಿ ಅಮಲಿನಲ್ಲಿದ್ದ ಕಾಯ್ದೆಗಳು ಹೊಸ ಮಾರಾಟಕರ ಕಾಯ್ದೆಯು ಇಡೀ ನವ ಮೈಸೂರು ರಾಜ್ಯದಲ್ಲಿ ಜಾರಿಯಲ್ಲಿ ಬರುವ ವರೆಗೆ ಅಮಲಿನಲ್ಲಿದ್ದವು.

ಹೊಸ ಮಾರಾಟಕರ ಕಾಯ್ದೆಯು ಜಾರಿಯಲ್ಲಿ ಬರುವ ಪೂರ್ವದಲ್ಲಿ ಮುಂಬಯಿ ಕರ್ನಾಟಕದಲ್ಲಿ ದ್ವಿಮುಖಿ ಮಾರಾಟಕರ ಕಾಯ್ದೆಯು ಜಾರಿಯಲ್ಲಿದ್ದಿತು. ಈ ಹಳೇ ಕಾಯ್ದೆಯ ಪ್ರಕಾರ ಯಾವದೇ ವ್ಯಾಪಾರಸ್ಥನ ಖರೀದಿ ಅಥವಾ ವಿಕ್ರಿಗಳ ಮೊತ್ತವು ವರ್ಷಕ್ಕೆ ( ಪುನಃ ವಿಕ್ರಿಮಾಡುವವರಿಗೆ ) ರೂ. ೨೫,೦೦೦ ಅಥವಾ ( ಸರಕುಗಳನ್ನು ತಯಾರಿಸುವವರು ಇಲ್ಲವೆ ಆಯಾತ ಮಾಡುವವರಿಗೆ ) ರೂ. ೧೦,೦೦೦ ಮಿಕ್ಕಿದ ಪಕ್ಷದಲ್ಲಿ ಅವನು ಕರ ಕೊಡಲು ಪಾತ್ರನಾಗುತ್ತಿದ್ದನು. ಅದರಂತೆ ಹಳೇ ಮೈಸೂರ, ಹೈದರಾಬಾದ ಮತ್ತು ಮದ್ರಾಸ ಕರ್ನಾಟಕಗಳಲ್ಲಿ ಬಹುಮುಖಿ ಮಾರಾಟಕರ ಪದ್ಧತಿಯು ಜಾರಿಯಲ್ಲಿದ್ದಿತು. ಆದರೆ ಹಳೇ ಮೈಸೂರ ಮತ್ತು ಮದ್ರಾಸ ಭಾಗಗಳಲ್ಲಿ ಯಾವ ವ್ಯಾಪಾರಸ್ಥನ ವಿಕ್ರಿಯು ಮೊತ್ತವು ವರ್ಷಕ್ಕೆ ೧೦ ಸಾವಿರ ರೂಪಾಯಿಗೂ ಮಿಕ್ಕುತ್ತಿತ್ತೋ ಅವನು ಕರ ಕೊಡಲು ಪಾತ್ರನಾಗುತ್ತಿದ್ದನು. ಆದರೆ ಹೈದರಾಬಾದದಲ್ಲಿ ಈ ಮೊತ್ತದ ಮಿತಿ ೫,೦೦೦ ಇದ್ದಿತು.

ಒಂದೇ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಮಾರಾಟಕರ ಪದ್ಧತಿ ಜಾರಿಯಲ್ಲಿದ್ದ ಮೂಲಕ ಆಡಳಿತದ ದೃಷ್ಟಿಯಿಂದ ತೊಂದರೆಯಾಗತೊಡಗಿತು. ಮತ್ತು ೧-೭-೧೯೫೭ ರಿಂದ ಕೇಂದ್ರ ಸರಕಾರವು ಕೇಂದ್ರ ಮಾರಾಟಕರ ಕಾಯ್ದೆಯನ್ನು ಜಾರಿಯಲ್ಲಿ ತಂದಿದ್ದರಿಂದ ಎಲ್ಲ ರಾಜ್ಯಗಳಲ್ಲಿಯು ಮಾರಾಟಕರ ಕಾಯ್ದೆಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಯಿತು. ಈ

ಕಾರಣಗಳ ಮೂಲಕ ನವ ಮೈಸೂರ ರಾಜ್ಯದಲ್ಲಿ ಸಹ ನಮ್ಮ ಸರಕಾರವು ಹೊಸ ಮಾರಾಟಕರ ಕಾಯ್ದೆಯನ್ನು ಮಾಡಿ ತಾ. ೧-೧೦-೧೯೫೭ ರಿಂದ ಜಾರಿಯಲ್ಲಿ ತಂದಿರುತ್ತದೆ.

ಈ ಕಾಯ್ದೆಯನ್ನು ಜಾರಿಯಲ್ಲಿ ತರುವ ಪೂರ್ವದಲ್ಲಿ ರಾಜ್ಯ ಸರಕಾರವು ೧೯೫೭ ನೇ ಫೆಬ್ರುವರಿ ತಿಂಗಳಿನಲ್ಲಿ ಒಂದು ಮಸೂದೆಯನ್ನು ಮಂಡಿಸಿತು. ಅದಕ್ಕೆ ರಾಜ್ಯಾಂಗದ ವರ್ತಕರಿಂದಲೂ ಸಂಘ-ಸಂಸ್ಥೆಗಳಿಂದಲೂ ಹಲವಾರು ಸಲಹೆ ಸೂಚನೆಗಳು ಬಂದಿದ್ದನ್ನು ಅನುಲಕ್ಷಿಸಿ ರಾಜ್ಯ ಸರಕಾರವು ಅವುಗಳನ್ನು ಪರಿಶೀಲಿಸಲು ವಿಧಾನಸಭಾಸದಸ್ಯರ ಒಂದು ಪರಿಶೀಲನಾ ಸಮಿತಿ ( ಕಮಿಟಿ ) ಯನ್ನು ನಿಯಮಿಸಿತು. ಈ ಸಮಿತಿಯು ವರ್ತಕರಿಂದಲೂ ಸಂಘ-ಸಂಸ್ಥೆಗಳಿಂದಲೂ ಬಂದ ಎಲ್ಲ ಸಲಹೆ ಸೂಚನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ತನ್ನ ವರದಿ ಯನ್ನು ಒಪ್ಪಿಸಿತು. ಈ ವರದಿಯ ಆಧಾರದ ಮೇಲೆ ರಾಜ್ಯ ಸರಕಾರವು ಹೊಸ ಮಾರಾಟಕರ ಕಾಯ್ದೆಯನ್ನು ರೂಪಿಸಿ, ಪಾಸು ಮಾಡಿತು.

## ೨. ಈ ಕಾಯ್ದೆಯಂತೆ ವ್ಯಾಪಾರಸ್ಥನೆಂದರೆ ಯಾರು ?

೧. ಮೈಸೂರ ರಾಜ್ಯದಲ್ಲಿ ರೋಖ ಅಥವಾ ಉದ್ರಿ ಹಣಕ್ಕಾಗಿ ಸರಕುಗಳನ್ನು ಮಾರುವ, ಖರೀದಿ ಮಾಡುವ, ಹಂಚುವ, ಹಾಗೂ ಪುರವಠೆಮಾಡುವ ವ್ಯವಹಾರ ನಡಿಸುವವನು ವ್ಯಾಪಾರಸ್ಥನೆಂದು ಎಣಿಸಲ್ಪಡುತ್ತಾನೆ.

ಮೈಸೂರ ಸರಕಾರವನ್ನು ಬಿಟ್ಟು ಉಳಿದ ಎಲ್ಲ ರಾಜ್ಯ ಹಾಗೂ ಕೇಂದ್ರ ಸರಕಾರಗಳು ಇಂಥ ವ್ಯವಹಾರದ ಸಲುವಾಗಿ ವ್ಯಾಪಾರಸ್ಥರೆಂದು ಗಣಿಸಲ್ಪಡುವವು.

೨. ಅನಿಯಮಿತವಾಗಿ ( ಎಂದಾದರೊಮ್ಮೆ ) ಸ್ವಂತ ನಾತೆಯಿಂದಾಗಲಿ, ಯಾವದೇ ವರ್ಷದಲ್ಲಿ ಸರಕುಗಳನ್ನು ಕೊಳ್ಳುವ, ಮಾರುವ, ಪುರವಠೆ ಮಾಡುವ, ವಿತರಣೆ ಮಾಡುವವರು ಸಹ ವ್ಯಾಪಾರಸ್ಥರೆಂದು ತಿಳಿಯಲ್ಪಡುವರು.

ಇಂಥ ವ್ಯವಹಾರವನ್ನು ಮಾಡುವ ಯಾವದೇ ಹಿಂದು ಅವಿಭಕ್ತ ಕುಟುಂಬ, ಸಹಕಾರೀ ಸಂಘ, ಕ್ಲಬ್, ಯಾವದೇ ವ್ಯಾಪಾರೀ ಸಂಘ ಅಥವಾ ಸಂಸ್ಥೆ, ಆಡತಿ ವ್ಯಾಪಾರಿ, ಬ್ರೋಕರ, ಡೆಲ್ ಕ್ರೇಡರ ಏಜಂಟ ( ಗಿರಾಕಿಗೆ ಖಾತ್ರಿ ಎಂದು ಭರವಸೆ ಕೊಡುವವ ), ಲಿಲಾವುಗಾರ, ಹಾಗೂ ವ್ಯವಹಾರದ ಏಜಂಟ ಇವರು ಯಾವದೇ ಹೆಸರಿನಿಂದ ಕರೆಯಲ್ಪಡುತ್ತಿದ್ದರೂ—ಈ ಕಾಯ್ದೆಯಲ್ಲಿ ವ್ಯಾಪಾರಸ್ಥರೆಂದು ಗಣಿಸಲ್ಪಡುವರು.

ಈ ವ್ಯಾಪಾರಸ್ಥರಲ್ಲಿ ಕಾರಖಾನೆದಾರರು, ಸೆಕಂಡ ಹ್ಯಾಂಡ ಸಾಮಾನು ಗಳನ್ನು ಮಾರುವವರು, ಖಾನಾವಳಿಯವರು, ಚಹದಂಗಡಿಯವರು, ಕಾಂಟ್ರಾಕ್ಟರರು ( ಅವರು ಸ್ವಂತ ಉಪಯೋಗಿಸಿದ ಸರಕುಗಳ ಮೇಲೆ ), ಛಾಪಖಾನೆ ದಾರರು ( ಕಾಗದ, ಮಶಿಯನ್ನು ಸ್ವಂತ ಉಪಯೋಗಿಸಿದ್ದಲ್ಲಿ ), ಬಣ್ಣಗಾರರು (ಸ್ವಂತ ಬಣ್ಣವನ್ನು ಉಪಯೋಗಿಸಿದಾಗ), ಫೋಟೋಗ್ರಾಫರರು, ದವಾಖಾನೆಯ ಒಡೆತನವಿರುವ ವೈದ್ಯಕೀಯ ವ್ಯವಸಾಯದವರು, ಜಿನಿಂಗ ಮತ್ತು ಪ್ರೆಸಿಂಗ ಫ್ಯಾಕ್ಟರಿಯವರು ( ತಮ್ಮಲ್ಲಿಯ ಕಿಂತಾನ ಮತ್ತು ಕಬ್ಬಿಣ ಪಟ್ಟಿಯನ್ನು ಉಪಯೋಗಿಸಿದಲ್ಲಿ ), ಗಡಿಯಾರ ದುರುಸ್ತಿ ಮಾಡುವವರು ( ತಮ್ಮ ಬಿಡಿಭಾಗಗಳನ್ನು ದುರುಸ್ತಿಯಲ್ಲಿ ಉಪಯೋಗಿಸಿದಾಗ ), ಮೊದಲಾದವರೆಲ್ಲರೂ ಸಮಾವೇಶ ವಾಗುತ್ತಾರೆ.

ಮೈಸೂರು ರಾಜ್ಯದ ರಹವಾಸಿಯಲ್ಲದ ಇತರ ರಾಜ್ಯದ ಯಾವದೇ ವ್ಯಾಪಾರಸ್ಥನು ಮೈಸೂರ ರಾಜ್ಯದ ಏಜಂಟ ಅಥವಾ ಅಡತದಾರರ ಮುಖಾಂತರ ಮೈಸೂರು ರಾಜ್ಯದಲ್ಲಿ ವ್ಯಾಪಾರ ಮಾಡಿದಾಗ್ಗೆ ಅಂಥ ಏಜಂಟರೂ ಅಡತ ವ್ಯಾಪಾರಸ್ಥರೂ ಪರಪ್ರಾಂತದ ವ್ಯಾಪಾರಸ್ಥರ ಪರವಾಗಿ ವ್ಯಾಪಾರಸ್ಥರೆಂದು ಎಣಿಸಲ್ಪಡುವರು.

**ಅಪವಾದ:—** ಸ್ವಂತ ಸಾಗುವಳಿ ಮಾಡತಕ್ಕ ಒಕ್ಕಲಿಗನು ಮತ್ತು ಸ್ವಂತ ಉಳುಮೆಯಿಂದ ಬೆಳೆದ ಒಕ್ಕಲುತನದ ಹುಟ್ಟುವಳಿಯನ್ನು ಮಾರುವವನು ವ್ಯಾಪಾರಸ್ಥನೆಂದು ಗಣಿಸಲ್ಪಡುವದಿಲ್ಲ.

## ೩. ಈ ಕಾಯ್ದೆಯನ್ವಯ 'ಮಾರಾಟ' ಅಂದರೆ ಏನು ?

ಒಬ್ಬ ವ್ಯಾಪಾರಿಯು ಇನ್ನೊಬ್ಬನಿಗೆ ರೋಖ ಇಲ್ಲವೆ ಉದ್ದರಿ ಹಣಕ್ಕಾಗಿ ಇಲ್ಲವೆ ಇತರ ಬೆಲೆ ಬಾಳುವ ವಸ್ತುವಿಗಾಗಿ ಸರಕುಗಳ ಮೇಲಿನ ಒಡೆತನವನ್ನು ಬದಲಾಯಿಸಿದರೆ 'ಮಾರಾಟ' ವೆಂದೆನಿಸುತ್ತದೆ.

ಇಂಥ ಮಾರಾಟದಲ್ಲಿ, (ಅ) ವರ್ಕ್ಸ ಕಾಂಟ್ರಾಕ್ಟ ಪೂರ್ತಿಗೊಳಿಸಲು ಬೇಕಾಗುವ ಸರಕುಗಳ ಬದಲಾವಣೆಯನ್ನು, ಇತರ ಸಂಘ-ಸಂಸ್ಥೆಗಳು ತನ್ನ ಸದಸ್ಯರಿಗೆ ರೋಖ ಇಲ್ಲವೆ ಉದ್ದರಿ ಹಣಕ್ಕಾಗಿ ಅಥವಾ (ಬ) ಇತರ ಬೆಲೆ ಬಾಳುವ ವಸ್ತುವಿಗಾಗಿ ಪುರವಠೆ ಇಲ್ಲವೆ ವಿತರಣೆ ಮಾಡಿದಾಗ್ಗೆ ಮಾರಾಟವೆಂದು ಗಣಿಸಲಾಗುವದು.

ಕಂತಿನ ಮೇಲೆ ಮಾರಾಟ ಮಾಡಿದ ಯಾವದೇ ವಸ್ತುವಿನ ಒಡೆತನ ವರ್ಗಾಯಿಸದಿದ್ದಾಗ್ಯೂ ಇಂಥ ವ್ಯವಹಾರವು ಸಹ ಮಾರಾಟವೆಂದು ತಿಳಿಯಲಾಗುವದು.

ನಿಶ್ಚಿತ ಸರಕುಗಳ ಮಾರಾಟ ಇಲ್ಲವೆ ಖರೀದಿಯು ಕರಾರು ಆಗುವಾಗ, ಹಾಗೂ ಅನಿಶ್ಚಿತ ಇಲ್ಲವೆ ಮುಂದೆ ಗೊತ್ತುಮಾಡಲ್ಪಡುವ ಸರಕುಗಳ ಮಾರಾಟ ಅಥವಾ ಖರೀದಿಯ ಒಪ್ಪಂದಕ್ಕೆ ಕೊಳ್ಳುವವನ ಒಪ್ಪಿಗೆಯು ಮುಂಚಿತವಾಗಿ ಇಲ್ಲವೆ ತದನಂತರವಾಗಿ ದೊರಕಿದ್ದರೂ ಸರಕುಗಳನ್ನು ಸಲ್ಲಿಸುವಾಗ ಅವು ಇರುವ ಸ್ಥಳವು ಈ ರಾಜ್ಯದಲ್ಲಿದ್ದರೆ ಆ ಸರಕುಗಳ ಮಾರಾಟ ಇಲ್ಲವೆ ಖರೀದಿ ಇದೇ ರಾಜ್ಯದಲ್ಲಿ ಆಯಿತೆಂದು ಗಣಿಸಲಾಗುವದು. ಒಂದಕ್ಕಿಂತ ಹೆಚ್ಚು ಸ್ಥಳಗಳಲ್ಲಿ ಸರಕುಗಳು ಇದ್ದರೆ ಮತ್ತು ಇಂಥ ಸರಕುಗಳ ಬಗ್ಗೆ ಒಂದೇ ಒಪ್ಪಂದವಾಗಿದ್ದರೆ ಅಂಥ ಪ್ರತಿಯೊಂದು ಸ್ಥಳದಲ್ಲಿದ್ದ ಸರಕುಗಳ ಬಗ್ಗೆ ಬೇರೆ ಬೇರೆ ಒಪ್ಪಂದವೆಂದು ಗಣಿಸಲಾಗುವದು.

ಈ ಕಾಯ್ದೆಯಲ್ಲಿ ವಿರುದ್ಧವಾದದ್ದು ಏನೇ ಇದ್ದಾಗ್ಯೂ, ಈ ಕಾಯ್ದೆಗೋಸ್ಕರ ಸರಕುಗಳು ಮೂಲ ಮಾಲಕನಿಂದ ಆತನ ಮಾರಾಟದ ಏಜಂಟನಿಗೆ ಮತ್ತು ಏಜಂಟನಿಂದ ಖರೀದಿದಾರನಿಗೆ ವರ್ಗಾಯಿಸಲ್ಪಟ್ಟರೆ ಅಥವಾ ಸರಕುಗಳನ್ನು ಮಾರಾಟಗಾರನಿಂದ ಖರೀದಿ ಏಜಂಟನಿಗೆ ವರ್ಗಾಯಿಸಿ ಮುಂದೆ ಖರೀದಿ ಏಜಂಟನಿಂದ ತನ್ನ ಗಿರಾಕಿಗೆ ಸರಕುಗಳನ್ನು ವರ್ಗಾಯಿಸಿದಾಗ ಆ ಏಜಂಟನು :-

(೧) ಸರಕುಗಳನ್ನು ಒಂದು ದರದಿಂದ ಮಾರಿ ಇನ್ನೊಂದು ದರದಿಂದ ತನ್ನ ಗಿರಾಕಿಗೆ ರಕಮನ್ನು ಸಲ್ಲಿಸಿದಾಗ;

(೨) ಸರಕುಗಳನ್ನು ಒಂದು ದರದಿಂದ ಖರೀದಿಮಾಡಿ ಬೇರೊಂದು ದರದಿಂದ ತನ್ನ ಗಿರಾಕಿಗೆ ಲೆಕ್ಕದ ರಕಮನ್ನು ಸಲ್ಲಿಸಿದಾಗ;

(೩) ತನ್ನ ಮೂಲ ಗಿರಾಕಿಯ ವತಿಯಿಂದ ಮಾರಾಟ ಇಲ್ಲವೆ ಖರೀದಿ ಮಾಡಿದ ಪೂರ್ಣ ಜಮಾಖರ್ಚಿನ ಬಗ್ಗೆ ಗಿರಾಕಿಗೆ ಲೆಕ್ಕ ಒಪ್ಪಿಸದಿದ್ದರೆ,

(೪) ಅಸ್ತಿತ್ವದಲ್ಲಿರದ ಅಥವಾ ಬಿನಾಮಿ ಗಿರಾಕಿಯ ಹೆಸರಿನಲ್ಲಿ ಮಾರಾಟ ಮಾಡಿದ್ದರೆ;

ಎರಡು ಸ್ವತಂತ್ರ ಖರೀದಿ ಅಥವಾ ಮಾರಾಟದ ವ್ಯವಹಾರ ನಡೆದವೆಂದು ತಿಳಿಯಲಾಗುವದು.

## ೪. ನೋಂದಾಯಿಸಲು ಮತ್ತು ಲಾಯಸೆನ್ಸ ಪಡೆಯಲು ಅರ್ಹರಾದ ವ್ಯಾಪಾರಸ್ಥರು.

ಯಾವ ವ್ಯಾಪಾರಸ್ಥರ ವರ್ಷದ ವ್ಯವಹಾರವು ರೂ. ೭,೫೦೦ ಕ್ಕೆ ಮಿಕ್ಕು ವದೋ ಅವರು ಈ ಕಾಯ್ದೆಯ ಪ್ರಕಾರ ನೋಂದಣಿ ದಾಖಲೆಯನ್ನು ಪಡೆದು ಕೊಳ್ಳಲೇಬೇಕು. ಇಲ್ಲದಿದ್ದರೆ ಅವರು ದಂಡ-ಶಿಕ್ಷೆಗಳಿಗೆ ಪಾತ್ರರಾಗುತ್ತಾರೆ.

ಆದ್ದರಿಂದ ಇಂಥ ವ್ಯಾಪಾರಸ್ಥರು ತಮ್ಮ ಹದ್ದಿಯಲ್ಲಿರುವ ಅಸಿಸ್ಟಂಟ ಕಾಮರ್ಶಿಯಲ್ ಟ್ಯಾಕ್ಸ ಆಫೀಸರ ಅಥವಾ ಕಮರ್ಶಿಯಲ್ ಟ್ಯಾಕ್ಸ ಆಫೀಸರ ಇವರಿಗೆ ೧ ನೇ ನಂಬರ ಫಾರ್ಮಿನಲ್ಲಿ ಈ ಕಾಯ್ದೆಯು ಜಾರಿಯಲ್ಲಿ ಬಂದ ೯೦ ದಿವಸಗಳೊಳಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು ಮತ್ತು ಈ ಕಾಯ್ದೆಯು ಜಾರಿಯಲ್ಲಿ ಬಂದ ನಂತರ ಯಾವ ವ್ಯಾಪಾರಸ್ಥರ ವ್ಯವಹಾರವು ರೂ ೭,೫೦೦ ಕ್ಕೆ ಮಿಕ್ಕುವದೋ ಅಂಥವರು ಸಹ ಮೇಲ್ಕಾಣಿಸಿದ ಅಧಿಕಾರಿಗಳಿಗೆ ಮೂವತ್ತು ದಿವಸಗಳೊಳಗೆ ಅರ್ಜಿ ಮಾಡಿಕೊಳ್ಳತಕ್ಕದ್ದು. ಅರ್ಜಿಯ ಜೊತೆಗೆ ನೋಂದಣಿಯ ಸಲುವಾಗಿ ೬ ರೂಪಾಯಿ ಫೀಯನ್ನು ಮನಿಯಾರ್ಡರಿನಿಂದಾಗಲಿ. ಚೆಕ್ ಅಥವಾ ಡ್ರಾಫ್ಟ ನಿಂದಾಗಲಿ, ಟ್ರೇಝರಿ ಚಲನಿನಿಂದಾಗಲಿ ಫೀ ತುಂಬಿದ ಪಾವತಿಯನ್ನು ಇಡ ತಕ್ಕದ್ದು. ಪ್ರತಿಯೊಬ್ಬ ವ್ಯಾಪಾರಸ್ಥನು ಈ ಕಾಯ್ದೆಯನ್ವಯ ತಮ್ಮ ನೋಂದಣಿ ದಾಖಲೆಯ ಅವಧಿಯನ್ನು ಬೆಳಿಸಿಕೊಳ್ಳಬೇಕಾಗುವದು. ಇದಕ್ಕಾದರೂ ೬ ರೂ. ಫೀ ತುಂಬಿದ ಚಲನನ್ನು ಲಗತ್ತು ಇಟ್ಟು ಅರ್ಜಿ ಮಾಡಿಕೊಳ್ಳಬೇಕು. ಈ ಅರ್ಜಿಯನ್ನು ವರ್ಷಾರಂಭದ ೩೦ ದಿವಸಗಳಲ್ಲಿ ಸಲ್ಲಿಸಬೇಕು. ಯಾವ ವ್ಯಾಪಾರಸ್ಥನ ವ್ಯವಹಾರವು ಬೇರೆ ಬೇರೆ ಸ್ಥಳಗಳಲ್ಲಿ ಇರುವದೋ ಅಂಥವರು ತಮ್ಮ ವ್ಯವಹಾರದ ಮುಖ್ಯ ಸ್ಥಳದ ನೋಂದಣಿ ಅಧಿಕಾರಿಗಳಕಡೆಗೆ ಎಲ್ಲ ಶಾಖೆಗಳ ಸಲುವಾಗಿ ಒಂದೇ ಅರ್ಜಿ ಮಾಡಿಕೊಳ್ಳಬೇಕು

ವರ್ಷಕ್ಕೆ ರೂ. ೭,೫೦೦ ಕಡಿಮೆ ವ್ಯವಹಾರವುಳ್ಳ ವ್ಯಾಪಾರಸ್ಥರು ಸಹ ಈ ಕಾಯದೆಯನ್ವಯ ನೋಂದಣಿ ದಾಖಲೆಯನ್ನು ಪಡೆಯಬಹುದು. ಇಂಥ ಸಣ್ಣ ವ್ಯಾಪಾರಸ್ಥರು ನೋಂದಣಿ ಮಾಡಿಸಿಕೊಳ್ಳುವದು ಉಚಿತವಾದದ್ದು. ಯಾಕೆಂದರೆ ವ್ಯಾಪಾರಸ್ಥರ ವ್ಯವಹಾರವು ೭,೫೦೦ ರೂಪಾಯಿಗೆ ಮಿಕ್ಕಿದರೆ ಎಲ್ಲ ವ್ಯವಹಾರದಮೇಲೆ ಕರ ಕೊಡಬೇಕಾಗುವದು. ಮೊದಲಿನ ಮುಂಬಯಿ ಮಾರಾಟ ಕರ ಕಾಯ್ದೆಯಂತೆ ಈ ಕಾಯದೆಯಲ್ಲಿ ಮೊದಲಿನ ೭,೫೦೦ ರೂ. ವಿಕ್ರಿಯು ಕರಮುಕ್ತವಾಗುವ ಅವಕಾಶವಿಲ್ಲ ಆದ್ದರಿಂದ ನೋಂದಣಿ ಪಡೆದುಕೊಂಡ ವ್ಯಾಪಾರಸ್ಥರಿಗೆ ಕರವನ್ನು ವಸೂಲು ಮಾಡುವ ಅಧಿಕಾರ ಇದ್ದುದರಿಂದ ಮೊದಲೇ ನೋಂದಣಿಯನ್ನು ಪಡೆದುಕೊಂಡ ವ್ಯಾಪಾರಿಯು ತಾನು ಕೊಡಬೇಕಾದ ಕರವನ್ನು ವಸೂಲು ಮಾಡಿ ಕೊಡಲು ಬರುವದು.

---

ನೋಂದಣಿ ದಾಖಲೆಗಳು ೨ನೇ ನಂಬರ ಫಾರ್ಮಿನಲ್ಲಿ ವ್ಯವಹಾರದ ಮುಖ್ಯ ಸ್ಥಳದ ಸಲುವಾಗಿಯೂ ಮತ್ತು ಅದರ ಸಕಲ ಬೇರೆ ಬೇರೆ ಶಾಖೆಗಳಿದ್ದ ಸ್ಥಳಗಳ ಸಲುವಾಗಿಯೂ ಸಂಬಂಧಿಸಿದ ಅಧಿಕಾರಿಗಳಿಂದ ಕೊಡಲ್ಪಡುವವು. ಇಂಥ ದಾಖಲೆಗಳನ್ನು ಆಯಾ ವ್ಯವಹಾರದ ಸ್ಥಳಗಳಲ್ಲಿ ಕಾಣಿಸುವಂತೆ ಇಡತಕ್ಕದ್ದು.

ನೋಂದಣಿಯ ದಾಖಲೆಗಳಲ್ಲಿ ಬದಲಾವಣೆಗಳಾಗುವದಿದ್ದರೆ ಅರ್ಜಿಯ ಮುಖಾಂತರ ಅಧಿಕಾರಿಗಳ ಕಡೆಯಿಂದ ಬದಲಾವಣೆಗಳನ್ನು ಮಾಡಿಸಿಕೊಳ್ಳ ಬಹುದು. ಇಂಥ ದಾಖಲೆಗಳು ಕಳೆದರೆ, ಹರಿದರೆ ಅಥವಾ ಕೆಟ್ಟುಹೋದರೆ, ನಿರ್ದಿಷ್ಟ ಫೀಯನ್ನು ( ಎರಡು ರೂಪಾಯಿ ) ಸಲ್ಲಿಸಿ ಅಧಿಕಾರಿಗಳ ಕಡೆಯಿಂದ ನೋಂದಣಿಯ ನಕಲನ್ನು ಪಡೆಯಬಹುದು.

## ೫. ಲಾಯಸನ್ಸ ಪಡೆದುಕೊಳ್ಳಬೇಕಾದ ನೋಂದಣಿ ವ್ಯಾಪಾರಸ್ಥರು.

ನೋಂದಾಯಿಸಲ್ಪಟ್ಟ ಎಲ್ಲ ವ್ಯಾಪಾರಸ್ಥರು ಕೆಳಗೆ ಕಾಣಿಸಿದ ಸರಕುಗಳ ವ್ಯಾಪಾರ ಮಾಡುತ್ತಿದ್ದರೆ ಈ ಕಾಯ್ದೆಯನ್ವಯ ಲಾಯಸೆನ್ಸ ಪಡೆದುಕೊಳ್ಳಬೇಕಾ ಗುತ್ತದೆ. ಅದಕ್ಕಾಗಿ ಅವುಗಳ ಮುಂದೆ ಕಾಣಿಸಿದಂತೆ ಫೀಯನ್ನು ತುಂಬ ಬೇಕಾಗುತ್ತದೆ.

(೧) ಕೈಮಗ್ಗದ ಬಟ್ಟೆ .... .... ರೂ. ೧೦೦೦ ಕ್ಕೆ—ರೂ. ೧-೫೦

(೨) ಕಚ್ಚಾ ರೇಶ್ಮೆ, ಫಿಲೇಚರ ರೇಶ್ಮೆ, ಚರಕಾ ರೇಶ್ಮೆ ( ಕೈಯಿಂದ ಹುರಿ ಮಾಡಿದ್ದು ), ಕೃತ್ರಿಮ ರೇಶ್ಮೆ ( ಚಮಕಾ ರೇಶ್ಮೆಯನ್ನು ಬಿಟ್ಟು) ರೂ. ೧೦೦೦ ಕ್ಕೆ—ರೂ. ೧-೫೦

(೩) ಗೋದಿ ಅದರ ಹಿಟ್ಟು ಅಂದರೆ, ಮೈದಾ, ಸೂಜಿ, ಮತ್ತು ಬ್ರ್ಯಾನ್, ಬ್ರೆಡ್, ಭತ್ತ, ಅಕ್ಕಿ ( ಚುರಮುರಿ, ಅವಲಕ್ಕಿ ಸಹಿತ ), ರಾಗಿ, ಜೋಳ, ಗೋವಿನ ಜೋಳ, ಸಜ್ಜೆ, ನವಣೆ, ಸಾವೆ. .... ... ರೂ. ೧೦೦೦ ಕ್ಕೆ—ರೂ. ೧-೫೦

(೪) ಗಟ್ಟಿ ಬಂಗಾರ ಮತ್ತು ಬೆಳ್ಳಿ. ರೂ. ೧೦೦೦ ಕ್ಕೆ—ರೂ. ೧-೦೦

(೫) (ಅ) ಮೋಟಾರ ಕಾರುಗಳು, ಮೋಟಾರ ಟ್ಯಾಕ್ಸಿ ಕ್ಯಾಬ, ಮೋಟಾರ ಸಾಯಕಲ್ಲು, ಸೈಕಲ ಜೋಡಣೆಗಳು, ಮೋಟಾರ ಸ್ಕೂಟರುಗಳು, ಸಣ್ಣ ಮೋಟರ

ಬಸ್ಸಗಳು, ಮೋಟಾರ ವ್ಯಾನು
ಗಳು, ಲಾರಿಗಳು ಸಹಿತವಾಗಿ
ಮೋಟಾರ ವಾಹನಗಳು.

(ಬ) ಮೋಟಾರ ವಾಹನಗಳ ಚೆಸ್ಸಿಗಳು.

(ಕ) ಮೋಟಾರ ವಾಹನಗಳ ಬಿಡಿ
ಭಾಗಗಳು.

(ಡ) ಮೋಟಾರ ವಾಹನಗಳಿಗೆ ಉಪ
ಯೋಗ ಬೀಳುವ ವಸ್ತುಗಳು
( ಟಾಯರ, ಟ್ಯೂಬ, ಬ್ಯಾಟರಿ
ಸಹಿತ.) .... .... ರೂ. ೧೦೦೦ ಕ್ಕೆ—ರೂ. ೨.

(೬) ಅಡತಿ ವ್ಯವಹಾರದ ವ್ಯಾಪಾರಸ್ಥರು. —— —ರೂ. ೫೦-೦೦

ಮೇಲ್ಕಾಣಿಸಿದ (೧), (೨), (೩) ಈ ಸರಕುಗಳಮೇಲೆ ಯಾವದೇ ತರದ ಕರಗಳು ಇರುವದಿಲ್ಲ. (೪) ನೇದರಲ್ಲಿ ನಮೂದಿಸಲಾದ ವಸ್ತುಗಳಿಗೆ ಅವುಗಳ ಮೊದಲನೆಯ ವಿಕ್ರಿಯ ಹಂತದಲ್ಲಿ ೧೦೦ ಕ್ಕೆ ೦-೭೫ ನಯೆ ಪೈಸೆ ಮಾರಾಟ ಕರ ಬೀಳುವದು. (೫) ನೇದರಲ್ಲಿ ನಮೂದಿಸಲಾದ ವಸ್ತುಗಳಿಗೆ ಅವುಗಳ ಮೊದಲ ನೆಯ ವಿಕ್ರಿಯ ಹಂತದಲ್ಲಿ ೧೦೦ ಕ್ಕೆ ೫ ರಂತೆ ಮಾರಾಟ ಕರ ಬೀಳುವದು. ಈ ಲಾಯಸನ್ಸ ಫೀಯ ಮಿತಿಯು ರೂ. ೨೦೦೦ ಕ್ಕಿಂತ ಹೆಚ್ಚು ಇರುವದಿಲ್ಲ. ಆದರೆ ಅಡತಿ ವ್ಯವಹಾರದ ವ್ಯಾಪಾರಸ್ಥರು ಈ ಲಾಯಸನ್ಸ್ ಫೀಯನ್ನು ೫೦ ರೂಪಾಯಿ ಗಿಂತ ಹೆಚ್ಚು ಕೊಡಬೇಕಾಗಿಲ್ಲ.

## ೬ ಲಾಯಸನ್ಸ ಪಡೆಯುವ ಬಗೆ.

ಲಾಯಸನ್ಸ ಪಡೆಯಲು ಅರ್ಹತೆಯುಳ್ಳ ವ್ಯಾಪಾರಸ್ಥನು ಮೊದಲು ನೋಂದಣಿಯನ್ನು ಪಡೆಯಬೇಕಾಗುತ್ತದೆ. ಯಾರ ಒಟ್ಟು ವ್ಯವಹಾರವು ವರ್ಷಕ್ಕೆ ೭೫೦೦ ರೂ. ಗೆ ಮಿಕ್ಕುವದೋ ಅಂಥ ನೋಂದಾಯಿಸಲ್ಪಟ್ಟ ವ್ಯಾಪಾರಸ್ಥರು ಮಾತ್ರ ಈ ಲಾಯಸನ್ಸ ಪಡೆಯಬಹುದು. ಇದಕ್ಕಾಗಿ ಅವರು ತಮ್ಮ ವ್ಯವ ಹಾರದ ಮುಖ್ಯ ಸ್ಥಳದ ನೋಂದಣಿ ಅಧಿಕಾರಿಯ ಕಡೆಗೆ ತಮ್ಮ ಎಲ್ಲ ವ್ಯವಹಾರದ ಶಾಖೆಗಳ ಸಲುವಾಗಿ ಬೇರೆ ಬೇರೆಯಾಗಿ ಅರ್ಜಿಗಳನ್ನು ಫಾರ್ಮ ನಂಬರ ೧೦ ರಲ್ಲಿ ಸಲ್ಲಿಸಬೇಕು. ಈ ಅರ್ಜಿಗಳ ಜೊತೆಗೆ ವರ್ಷದ ವ್ಯವಹಾರದ ಅಂದಾಜಿನ ಮೇಲೆ ಲಾಯಸನ್ಸ ಫೀಯನ್ನು ಮೇಲ್ಕಾಣಿಸಿದ ಪ್ರಮಾಣದಲ್ಲಿ ಕಟ್ಟತಕ್ಕದ್ದು. ಇಂಥ ಫೀಯನ್ನು ಚೆಕ್ ಇಲ್ಲವೆ ಡ್ರಾಫ್ಟ, ಮನಿಯಾರ್ಡರ ಇಲ್ಲವೆ ಟ್ರೇಝರಿಯ ಚಲನಿನ ಮೂಲಕ ಕಳಿಸಬೇಕು. ಲಾಯಸನ್ಸಿಗಾಗಿ ಅರ್ಜಿಗಳನ್ನು ಈ ಕಾಯ್ದೆಯು

ಜಾರಿಯಲ್ಲಿ ಬಂದ ತೊಂಬತ್ತು ದಿನಗಳೊಳಗಾಗಿ ಮತ್ತು ಲಾಯಸೆನ್ಸಿನ ಅವಧಿಯನ್ನು ಬೆಳಿಸಿಕೊಳ್ಳುವ ಬಗ್ಗೆ ಅರ್ಜಿಗಳನ್ನು ಪ್ರತಿವರ್ಷ ವರ್ಷಾರಂಭದ ಪೂರ್ವ ಮೂವತ್ತು ದಿವಸಗಳಲ್ಲಿ ಫಾರ್ಮ ನಂಬರ ೧೦ ರಲ್ಲಿ ಮಾಡಿಕೊಳ್ಳತಕ್ಕದ್ದು. ಇಂಥ ವ್ಯಾಪಾರಸ್ಥರು ಸಂತೆಗಾಗಿ ಬೇರೆ ಬೇರೆ ಊರುಗಳಿಗೆ ಹೋಗುತ್ತಿದ್ದರೂ, ಅಂಥ ವ್ಯವಹಾರವನ್ನು ತಮ್ಮ ಲೆಕ್ಕದ ಪುಸ್ತಕಗಳಲ್ಲಿ ತೋರಿಸುತ್ತಿದ್ದರೆ ಅಂಥ ಸಂತೆಯ ಹೆಸರುಗಳನ್ನು ಲಾಯಸನ್ಸ ಅರ್ಜಿಯಲ್ಲಿ ಕಾಣಿಸಬೇಕು.

ಪರಪ್ರಾಂತದ ವ್ಯಾಪಾರಿಯು ನೇರವಾಗಿ ತನ್ನ ಏಜಂಟ ಇಲ್ಲವೆ ಮ್ಯಾನೇಜರನು ಮೇಲ್ಕಾಣಿಸಿದ ಸರಕುಗಳಿಗೆ ಒಳಪಟ್ಟ ವ್ಯವಹಾರವನ್ನು ನಡಿಸುತ್ತಿದ್ದರೆ, ವ್ಯವಹಾರವು ಪ್ರಾರಂಭವಾದ ೧೫ ದಿವಸಗಳಲ್ಲಿ ಪರಪ್ರಾಂತದ ವ್ಯಾಪಾರಿಯ ದೆಶೆಯಿಂದ ಲಾಯಸನ್ಸನ್ನು ಪಡೆದುಕೊಳ್ಳಲು ಅರ್ಜಿಯನ್ನು ಮಾಡಬೇಕು.

ಲಾಯಸನ್ಸ ಪಡೆಯಬೇಕಾದ ವ್ಯಾಪಾರಸ್ಥರು ಇಂಥ ಲಾಯಸನ್ಸನ್ನು ಮೇಲೆ ಹೇಳಿದ ಅವಧಿಯಲ್ಲಿ ಪಡೆದುಕೊಳ್ಳದಿದ್ದರೆ ಅಥವಾ ಅದರ ಅವಧಿಯನ್ನು ಬೆಳಿಸಿಕೊಳ್ಳಲು ತಪ್ಪಿದಕ್ಕೆ ತಾವು ಕೊಡಬೇಕಾದ ಲಾಯಸನ್ಸ ಫೀಯ ಹೊರತಾಗಿ ಲಾಯಸನ್ಸ ಫೀಯಷ್ಟೇ ದಂಡವನ್ನು ಕೊಡಬೇಕಾಗುವದು.

## ೭ ಈ ಕಾಯ್ದೆಯನ್ವಯ ಕೊಡಬೇಕಾದ ಕರಗಳ ವಿವರಣೆ.

ವ್ಯಾಪಾರಸ್ಥರು ತಮ್ಮ ವ್ಯವಹಾರದ ಮೇಲೆ ಈ ಕಾಯ್ದೆಯ ೫ನೇ ಕಲಮಿನಲ್ಲಿ ನಮೂದಿಸಿದಂತೆ ಕರ ಕೊಡಬೇಕಾಗುವದು. ಕಲಮು ೫ (೧) ರಲ್ಲಿ ನಮೂದಿಸಿದಂತೆ ಎಲ್ಲ ವ್ಯವಹಾರದ ಮೇಲೆ ೧೦೦ ಕ್ಕೆ ೨ ರಂತೆ ಪ್ರತಿ ವಿಕ್ರಿಯ ಮೇಲೂ ಟರ್ನ ಓವ್ಹರ ಟ್ಯಾಕ್ಸ ( ಬಹುಮುಖಿ ವಿಕ್ರಿಕರ ) ವನ್ನು ಕೊಡಬೇಕಾಗುವದು. ಆದರೆ ದ್ವಿದಳಧಾನ್ಯ, ಬೆಳ್ಳಿ ಬಂಗಾರದ ಸಾಮಾನುಗಳ ಮೇಲೆ ಹಾಗೂ ತಾ. ೧೪-೧೨-೧೯೫೭ ರಿಂದ ಬೆಲ್ಲ, ಉಳ್ಳಾಗಡ್ಡಿ, ಬೆಳ್ಳುಳ್ಳಿ, ಗೆಣಸು, ಬಟಾಟಿ ಇವುಗಳ ಮೇಲೆ ನೂರಕ್ಕೆ ೧ ರಂತೆ ಬಹುಮುಖಿ ವಿಕ್ರಿಕರವು ಬೀಳುವದು. ಇಂಥ ವಿಕ್ರಿಯ ಮೊತ್ತವನ್ನು ನಿರ್ಧರಿಸುವಾಗ ಪರಿಶಿಷ್ಟ ೨, ೩, ೪ ಮತ್ತು ೫ ರಲ್ಲಿ ನಮೂದಿಸಲಾದಸರಕುಗಳನ್ನು ಬಿಟ್ಟು, ಮತ್ತು ಕಲಮು ೬ ರನ್ವಯ ಲಾಯಸನ್ನಿಗೆ ಒಳಪಟ್ಟ ಸರಕುಗಳನ್ನು ಬಿಟ್ಟು, ಉಳಿದ ಸರಕಗಳ ಮಾರಾಟದ ಮೊತ್ತದ ಮೇಲೆ ನೂರಕ್ಕೆ ೧ ರಂತೆ ಇಲ್ಲವೆ ೨ ರಂತೆ ಬಹುಮುಖಿ ವಿಕ್ರಿ ಕರವನ್ನು ಹೇರಲಾಗುವದು.

ಕಲಮು ೫ (೨) ರ ಪ್ರಕಾರ ೧ ನೇ ಪರಿಶಿಷ್ಟದಲ್ಲಿ ನಮೂದಿಸಲಾದ ಸರಕುಗಳ ಮೊದಲನೇ ಮಾರಾಟದ ಹಂತದಲ್ಲಿ ಆ ಪರಿಶಿಷ್ಟದಲ್ಲಿ ಆಯಾ ಸರಕುಗಳ ಮುಂದೆ ಕಾಣಿಸಿದಂತೆ ಬಹುಮುಖಿ ಮಾರಾಟಕರದ ಹೊರ್ತಾಗಿ ಹೆಚ್ಚಿನ ಮಾರಾಟ

ಕರವನ್ನು ಕೊಡಬೇಕಾಗುವದು. ಈ ಹೆಚ್ಚಿನ ಕರವನ್ನು ವಸ್ತುಗಳ ಮೊದಲನೆಯ ವಿಕ್ರಿಯ ಮೇಲೆ ಮಾತ್ರ ಕೊಡಬೇಕಾಗುವದು. ಇಂಥ ಕರವನ್ನು ತಮ್ಮ ಖರೀದಿಯ ಮೇಲೆ ಒಮ್ಮೆ ಕೊಟ್ಟಲ್ಲಿ ಪುನಃ ಆ ಸರಕುಗಳ ಮೇಲೆ ವಿಕ್ರಿ ಕರ ಬೀಳುವದಿಲ್ಲ.

ಕಲಮು ೫ ( ೩ಅ ) ಪ್ರಕಾರ ೨ ನೇ ಪರಿಶಿಷ್ಟದಲ್ಲಿ ನಮೂದಿಸಿದ ಸರಕುಗಳ ಮೊದಲನೆಯ ವ್ಯಾಪಾರದ ಹಂತದಲ್ಲಿ ಮಾತ್ರ ಆ ಪರಿಶಿಷ್ಟದಲ್ಲಿ ಆಯಾ ಸರಕುಗಳ ಮುಂದೆ ಕಾಣಿಸಿದಂತೆ ವಿಕ್ರಿ ಕರವನ್ನು ಕೊಡಬೇಕಾಗುವದು. ಆದರೆ ಇಂಥ ಸರಕುಗಳ ಮೇಲೆ ಕಲಮು ೫ (೧) ರಲ್ಲಿ ನಮೂದಿಸಿದಂತೆ ಬಹುಮುಖಿ ವಿಕ್ರಿ ಕರವು ಬೀಳುವದಿಲ್ಲ.

ಕಲಮು ೫ ( ೩ಬ ) ದ ಪ್ರಕಾರ ೩ ನೇ ಪರಿಶಿಷ್ಟದಲ್ಲಿ ನಮೂದಿಸಿದಂತೆ ಮೊದಲನೆಯ ಇಲ್ಲವೆ ಕೊನೆಯ ಖರೀದಿಯ ಮೇಲೆ ಆಯಾ ಸರಕುಗಳ ಮುಂದೆ ಕಾಣಿಸಿದಂತೆ ಆಯಾ ಹಂತದಲ್ಲಿ ಬೀಳುವ ಖರೀದಿ ಕರಕ್ಕೆ ಪಾತ್ರವಾದ ಸರಕುಗಳು.

**ಮೊದಲನೇಯ ಹಂತದಲ್ಲಿ ಖರೀದಿ ಕರ ಬೀಳುವ ಸರಕುಗಳು.**

| | | |
|---|---|---|
| ೧. | ತೆಂಗಿನಕಾಯಿ, ಕೊಬ್ಬರಿ | ೧೦೦ ಕ್ಕೆ ೨ ರಂತೆ |
| ೨. | ತರವಾರ, ತಂಗಡಿ, ಕಕ್ಕೆ ಹಾಗೂ ಇತರ ಹದ ಮಾಡುವ ತೊಗಟೆಗಳು, ಅಳಲೇಕಾಯಿ, ಹಾಲಮಡ್ಡಿ ಅಂಟಳಕಾಯಿ, ಶೀಗೇಕಾಯಿ | ೧೦೦ ಕ್ಕೆ ೨ ರಂತೆ |
| ೩. | ತಂಬಾಕು-ಹದಮಾಡಿದ್ದು ಇಲ್ಲವೆ ವರ್ಜಿನಿಯಾ | ೧೦೦ ಕ್ಕೆ ೩ ರಂತೆ |
| ೪. | ತಂಬಾಕು ಇತರ | ೧೦೦ ಕ್ಕೆ ೨ ರಂತೆ |
| ೫. | ಕಚ್ಚಾ ಉಣ್ಣೆ | ೧೦೦ ಕ್ಕೆ ೧ ರಂತೆ |
| ೬. | ಮೆಣಸಿನ ಕಾಯಿ | ೧೦೦ ಕ್ಕೆ ೨ ರಂತೆ |
| ೭. | ಯಾಲಕ್ಕಿ | ೧೦೦ ಕ್ಕೆ ೨ ರಂತೆ |
| ೮. | ಅಡಿಕೆ | ೧೦೦ ಕ್ಕೆ ೨ ರಂತೆ |
| ೯. | ಮೆಣಸು | ೧೦೦ ಕ್ಕೆ ೨ ರಂತೆ |
| ೧೦. | ವರ್ತಮಾನ ಪತ್ರದ ಕಾಗದ | ೧೦೦ ಕ್ಕೆ ೩ ರಂತೆ |
| ೧೧. | ಬೀಡಿಯ ಎಲೆಗಳು | ೧೦೦ ಕ್ಕೆ ೨ ರಂತೆ |

**ಕೊನೆಯ ಹಂತದಲ್ಲಿ ಖರೀದಿಕರ ಬೀಳುವ ಸರಕುಗಳು.**

| | | |
|---|---|---|
| ೧. | ಕಾಜು ( ಗೇರುಹಣ್ಣು ) ಮತ್ತು ಅದರ ಬೀಜಗಳು | ೧೦೦ ಕ್ಕೆ ೨ ರಂತೆ |
| ೨. | ಅದಿರುಗಳು—ಮ್ಯಾಂಗನೀಜ, ಕಬ್ಬಿಣ ಕ್ರೋಮಾಯಿಟ ಹಾಗೂ ಕ್ಯಾವ್ರೋಲಿನ ಅದಿರು ಸಹಿತ | ೧೦೦ ಕ್ಕೆ ೩ ರಂತೆ |
| ೩. | ಎಲುಬು ಹಾಗೂ ಕೊಂಬುಗಳು | ೧೦೦ ಕ್ಕೆ ೨ ರಂತೆ |

ಕಲಮು ೫ (೪) ರ ಪ್ರಕಾರ ೪ ನೇ ಪರಿಶಿಷ್ಟದಲ್ಲಿ ನಮೂದಿಸಿದಂತೆ ಕೊನೆಯ ಹಂತದ ಖರೀದಿಯ ಮೇಲೆ ಅದರಲ್ಲಿ ಕಾಣಿಸಿದ ಪ್ರಕಟಿತ ಸರಕುಗಳ ಮೇಲೆ, ಅವುಗಳ ಮುಂದೆ ಹೇಳಿದ ಖರೀದಿ ಕರವನ್ನು ಕೊಡಬೇಕಾಗುವದು.

ಕೊನೆಯ ಖರೀದಿ ಅಂದರೆ ನೋಂದಾಯಿಸಲ್ಪಟ್ಟ ವ್ಯಾಪಾರಿಯು ಪ್ರಕಟಿತ ಸರಕುಗಳನ್ನು ಸ್ವತಃ ಉಪಯೋಗ ಮಾಡಿದಾಗ್ಗೆ, ಮಾಲು ಉತ್ಪಾದನೆಗಾಗಲಿ ಅಥವಾ ಕಾಂಟ್ರಾಕ್ಟಿನಲ್ಲಾಗಲಿ ಉಪಯೋಗಿಸಿದಾಗ ಅಥವಾ ಅವುಗಳನ್ನು ಗ್ರಾಹಕನಿಗೆ ( ನೋಂದಾಯಿಸಲ್ಪಡದ ವ್ಯಾಪಾರಿಗೆ ) ಮಾರಿದಾಗ ಅದು ಕೊನೆಯ ಖರೀದಿಯೆನಿಸುತ್ತದೆ.

ಕಲಮು ೮ ರ ಪ್ರಕಾರ ಪರಿಶಿಷ್ಟ ೫ ರಲ್ಲಿ ನಮೂದಿಸಿದ ಸರಕುಗಳ ಮೇಲೆ ಆಯಾ ನಿರ್ಬಂಧನೆಗಳಿಗೊಳಪಟ್ಟು ಯಾವ ಕರಗಳೂ ಬೀಳುವದಿಲ್ಲ.

ಮೇಲೆ ವರ್ಣಿಸಿದ ಕರಗಳ ಹೊರತಾಗಿ ಕೆಲವೊಂದು ಸಂದರ್ಭಗಳಲ್ಲಿ ಕಲಮು ೬ ರನ್ವಯ ಕೆಲವು ಸರಕುಗಳ ಮೇಲೆ ಲಾಯಸನ್ಸ ಫೀಯನ್ನು ಮತ್ತು ಅದರಲ್ಲಿ ನಿರ್ದಿಷ್ಟ ಪಡಿಸಿದ ಕರವನ್ನು ಮಾತ್ರ ಕೊಡಬೇಕಾಗುತ್ತದೆ. ಆದರೆ ಇಂಥ ಸರಕುಗಳ ಮೇಲೆ ಬಹುಮುಖಿ ವಿಕ್ರಿ ಕರವಾಗಲಿ ಅಥವಾ ಮತ್ಯಾವ ಕರಗಳೂ ಇರುವದಿಲ್ಲ. ಕಲಮು ೬ ರಲ್ಲಿ ನಮೂದಿಸಲಾದ (ಅ) ಬೆಳ್ಳಿ-ಬಂಗಾರದ ಗಟ್ಟಿಗಳು, (ಬ) ಮೋಟಾರು, ಮೋಟಾರ ಸಾಯಕಲ್ಲು, ಹಾಗೂ ಅವುಗಳ ಬಿಡಿ ಭಾಗಗಳು ಇವುಗಳ ವಿಕ್ರಿಯ ಮೇಲೆ ಮೊದಲನೆಯ ಹಂತದಲ್ಲಿ ಮಾತ್ರ ಅನುಕ್ರಮವಾಗಿ ೧೦೦ ಕ್ಕೆ ೦—೩೫ ನಯೆ ಪೈಸೆ ಮತ್ತು ನೂರಕ್ಕೆ ೫ ರಂತೆ, ಲಾಯಸನ್ಸ ಫೀ ಹೊರತಾಗಿ, ಕರ ಕೊಡಬೇಕಾಗುವದು. ಮತ್ತು ಎಲ್ಲ ವಸ್ತುಗಳ ಮೇಲೆ ನಿರ್ದಿಷ್ಟ ಪಡಿಸಿದ ದರದಂತೆ ಲಾಯಸನ್ಸ ಫೀ ಕೊಡಬೇಕಾಗುತ್ತದೆ. ಇದರ ವಿವರಗಳಿಗಾಗಿ " ನೋಂದಾಯಿಸಲು ಮತ್ತು ಲಾಯಸನ್ಸ ಪಡೆಯಲು ಅರ್ಹರಾದ ವ್ಯಾಪಾರಸ್ಥರು " ಎಂಬ ಶೀರ್ಷಿಕೆಯಲ್ಲಿ ನೋಡಬಹುದು

ಮೇಲೆ ವಿವರಿಸಿದ ಕರಗಳಿಗೆ ಅಥವಾ ಲಾಯಸನ್ಸ ಫೀಗೆ ಪಾತ್ರವಾದ ವ್ಯವಹಾರವನ್ನು ಬಿಟ್ಟು ಉಳಿದ ಎಲ್ಲ ವ್ಯವಹಾರದ ಮೇಲೆ ಕರ ಕೊಡಬೇಕಾಗುವದು. ಒಟ್ಟು ವ್ಯವಹಾರವೆಂದರೆ- ವ್ಯಾಪಾರಸ್ಥನು ತಾನು ನೇರವಾಗಿ ಇಲ್ಲವೆ ಇತರರ ಮುಖಾಂತರವಾಗಿ ರೋಖ ಹಣ ಅಥವಾ ಮುಂದೆ ಪಡೆಯಬಹುದಾದ ಹಣಕ್ಕಾಗಿ ಅಥವಾ ಇತರ ಯಾವದೇ ಪ್ರತಿಫಲಕ್ಕಾಗಿ ಸರಕುಗಳನ್ನು ಕೊಂಡು ಕೊಂಡ ಅಥವಾ ಮಾರಾಟ ಮಾಡಿದ ಒಟ್ಟು ಮೊತ್ತ. ಈ ಮೊತ್ತವನ್ನು ನಿರ್ಧರಿಸುವಾಗ ಕೆಳಗೆ ಕಾಣಿಸಿದ ಹಣವನ್ನು ವಜಾ ಮಾಡಲು ಬರುವದು :—

(೧) ರೋಖ ವಟಾವದ ಹಣ ( ಬಿಲ್ಲಿನಲ್ಲಿ ಬೇರೆ ತೋರಿಸಲ್ಪಟ್ಟಾಗ ).

(೨) ಮೊದಲು ಮಾರಾಟವಾಗಿ ತಿರುಗಿ ಬಂದ ( ವಾಪಸ್ಸು ಮಾಡಿದ ) ಸರಕುಗಳ ಬೆಲೆ.

(೩) ಒಬ್ಬ ಗಿರಾಕಿಯ ಸೌಲಭ್ಯಕ್ಕಾಗಿ ಮತ್ತೊಬ್ಬ ವ್ಯಾಪಾರಿಯಿಂದ ತಂದು ಆಗಲೆ ಗಿರಾಕಿಗೆ ಕೊಂಡ ಬೆಲೆಗೆ ಮಾರಿದ ಹಣ.

(೪) ಭಾಡಿಗೆ ಹಾಗೂ ಡಿಲಿವ್ಹರಿ ಚಾರ್ಜ ( ಬೇರೆ ತೋರಿಸಲ್ಪಟ್ಟಿದ್ದಾಗ ).

(೫) ಈ ಕಾಯ್ದೆಯನ್ವಯ ವಸೂಲು ಮಾಡಲ್ಪಟ್ಟ ಕರದ ಹಣ ಬೇರೆಯಾಗಿ ತೋರಿಸಲ್ಪಟ್ಟಾಗ.

ಮೇಲೆ ಕಾಣಿಸಿದ ೧ ರಿಂದ ೫ ರ ವರೆಗಿನ ಒಟ್ಟು ಹಣವನ್ನು ವಜಾ ಮಾಡಿ ಉಳಿದ ವ್ಯವಹಾರದ ಮೊತ್ತವನ್ನು ಬೇರೆ ಬೇರೆ ಕರಗಳಿಗೆ ಪಾತ್ರವಾಗುವಂತೆ ವಿಂಗಡಿಸಬೇಕಾಗುವದು.

ಬಹುಮುಖಿ ವಿಕ್ರಿ ಕರಕ್ಕೆ ಪಾತ್ರವಾಗುವ ಮೊತ್ತವನ್ನು ನಿರ್ಧರಿಸುವಾಗ ಕೆಳಗೆ ಕಾಣಿಸಿದ ವಿಕ್ರಿಗಳನ್ನು ವಜಾ ಮಾಡಬೇಕು :—

(೧) ಕೇಂದ್ರ ಮಾರಾಟ ಕರ ಕಾಯ್ದೆಗೆ ಪಾತ್ರವಾದ ವಿಕ್ರಿ.

(೨) ಪರದೇಶಕ್ಕೆ ನೇರವಾಗಿ ವಿಕ್ರಿ ಮಾಡಲು ಕಳಿಸಿದ ಸರಕುಗಳ ವಿಕ್ರಿ.

(೩) ಪರರಾಜ್ಯದಲ್ಲಿ ಆದ ವಿಕ್ರಿ.

(೪) ಕಲಮು ೬ ರಲ್ಲಿ ನಮೂದಿಸಿದ ಲಾಯಸನ್ಸಿಗೆ ಒಳಪಟ್ಟ ಸರಕುಗಳ ವಿಕ್ರಿ.

(೫) ಕಲಮು ೮ ರಲ್ಲಿ ನಮೂದಿಸಿದ ಕರಮುಕ್ತ ಸರಕುಗಳ ವಿಕ್ರಿ.

(೬) ಪರಿಶಿಷ್ಟ ೨, ೩, ೪ ರಲ್ಲಿ ನಮೂದಿಸಿದ ಸರಕುಗಳ ವಿಕ್ರಿ.

ಇವುಗಳನ್ನು ವಜಾ ಮಾಡಿ ಉಳಿದ ವ್ಯವಹಾರದ ಮೊತ್ತದ ಮೇಲೆ ೧೦೦ ಕ್ಕೆ ೧ ರಂತೆ ಇಲ್ಲವೆ ೨ ರಂತೆ ಬಹುಮುಖಿ ವಿಕ್ರಿ ಕರವನ್ನು ಆಕರಿಸಬೇಕು.

ಹೆಚ್ಚಿನ ಕರಕ್ಕೆ ಒಳಪಡುವ ಸರಕುಗಳ ಮಾರಾಟದ ವ್ಯವಹಾರವನ್ನು ನಿರ್ಧರಿಸುವಾಗ ಆ ಸರಕುಗಳ ಮೊದಲನೆಯ ವಿಕ್ರಿಯು ಹಂತವಿದ್ದಲ್ಲಿ ಆ ವ್ಯವಹಾರದ ಮೇಲೆ ಪರಿಶಿಷ್ಟ ೧ ರಲ್ಲಿ ಕಾಣಿಸಿದಂತೆ ಆಯಾ ಸರಕುಗಳ ಮೇಲೆ ಕರವನ್ನು ಆಕರಿಸಬೇಕು.

ವಿಕ್ರಿ ಕರಕ್ಕೆ ಒಳಪಟ್ಟ ಸರಕುಗಳ ಮಾರಾಟದ ವ್ಯವಹಾರವನ್ನು ನಿರ್ಧರಿಸುವಾಗ ೨ ನೇ ಪರಿಶಿಷ್ಟದಲ್ಲಿ ಕಾಣಿಸಿದ ಸರಕುಗಳ ಮೊದಲನೆಯ ಹಂತದ ಮಾರಾಟದ ರಕಮಿನ ಮೇಲೆ ಆಯಾ ಕರದ ದರದಂತೆ ಕರವನ್ನು ಆಕರಿಸಬೇಕು.

ಖರೀದಿ ಕರಕ್ಕೆ ಒಳಪಟ್ಟ ೩ ನೇ ಪರಿಶಿಷ್ಟದಲ್ಲಿ ನಮೂದಿಸಲಾದ ಸರಕುಗಳ ಕರಕ್ಕೆ ಪಾತ್ರವಾದ ಖರೀದಿಯ ವ್ಯವಹಾರವನ್ನು ನಿರ್ಧರಿಸುವಾಗ ಆಯಾ ಸರಕುಗಳ ಮೊದಲನೆಯ ಅಥವಾ ಕೊನೆಯ ಹಂತದ ಖರೀದಿಯ ರಕಮಿನ ಮೇಲೆ ಆ ಪರಿಶಿಷ್ಟದಲ್ಲಿ ನಮೂದಿಸಲಾದ ಕರದ ದರದಂತೆ ಖರೀದಿ ಕರದ ಆಕರಣೆಯನ್ನು ಮಾಡಬೇಕು.

ಖರೀದಿ ಕರಕ್ಕೆ ಒಳಪಟ್ಟ ೪ ನೇ ಪರಿಶಿಷ್ಟದಲ್ಲಿ ನಮೂದಿಸಲಾದ ಸರಕುಗಳ ಕರಕ್ಕೆ ಪಾತ್ರವಾದ ಖರೀದಿ ವ್ಯವಹಾರವನ್ನು ನಿರ್ಧರಿಸುವಾಗ ಆ ಸರಕುಗಳ ಕೊನೆಯ ಹಂತದ ಖರೀದಿಯ ರಕಮಿನ ಮೇಲೆ ಆ ಪರಿಶಿಷ್ಟದಲ್ಲಿ ನಮೂದಿಸಲಾದ ದರದಂತೆ ಖರೀದಿ ಕರದ ಆಕರಣೆ ಮಾಡಬೇಕು.

## ೮. ವ್ಯವಹಾರಕ್ಕನುಗುಣವಾಗಿ ವ್ಯಾಪಾರಸ್ಥರ ವರ್ಗೀಕರಣ ಹಾಗೂ ಅವರು ಪಾಲಿಸತಕ್ಕ ನಿಯಮಗಳು.

ಹಿಂದೆ ಹೇಳಿದಂತೆ ಈ ರಾಜ್ಯದಲ್ಲಿ ಯಾವ ವ್ಯಾಪಾರಸ್ಥನ ವರ್ಷದ ಖರೀದಿಯ ಅಥವಾ ವಿಕ್ರಿಯ ವ್ಯವಹಾರವು ರೂ. ೭,೫೦೦ ಕ್ಕೆ ಮಿಕ್ಕಿರುವದೋ, ಅಂಥ ಪ್ರತಿಯೊಬ್ಬ ವ್ಯಾಪಾರಸ್ಥನೂ ಈ ಕಾಯ್ದೆಯನ್ವಯ ತನ್ನ ವ್ಯವಹಾರದ ಮೇಲೆ ಕರ ಕೊಡಲು ಪಾತ್ರನಾಗುತ್ತಾನೆ; ಹಾಗೂ ನೋಂದಾಯಿಸಿಕೊಳ್ಳಲು ಬದ್ಧನಾಗುತ್ತಾನೆ. ಇದಕ್ಕಿಂತ ಕಡಿಮೆ ವ್ಯವಹಾರವುಳ್ಳವರು ಕರ ಕೊಡಲು ಪಾತ್ರರಲ್ಲ. ಆದರೆ ಅವರ ವ್ಯವಹಾರವು ರೂ. ೭,೫೦೦ ಕ್ಕೆ ಮಿಕ್ಕಿದ ಪಕ್ಷದಲ್ಲಿ ಎಲ್ಲ ವ್ಯವಹಾರದ ಮೇಲೂ ಕರ ಕೊಡಬೇಕಾಗುವದು. ಮುಂಬಯಿ ಮಾರಾಟ ಕರದ ಕಾಯ್ದೆಯಲ್ಲಿದ್ದಂತೆ ಈ ಕಾಯ್ದೆಯಲ್ಲಿ ಮೊದಲನೆಯ ರೂ. ೭,೫೦೦ ಗಳ ವ್ಯವಹಾರವು ಕರ ಮುಕ್ತವಾಗುವ ಅವಕಾಶವಿಲ್ಲ. ನೋಂದಾಯಿಸಲ್ಪಟ್ಟ ವ್ಯಾಪಾರಸ್ಥರಲ್ಲಿ ಈ ಕೆಳಗಿನಂತೆ ಮೂರು ವರ್ಗಗಳನ್ನು ಮಾಡಲಾಗಿದೆ.

(೧) ರೂ. ೭,೫೦೦ ಕ್ಕಿಂತ ಹೆಚ್ಚು, ರೂ. ೨೦,೦೦೦ ಕ್ಕಿಂತ ಕಡಿಮೆ ವಾರ್ಷಿಕ ವ್ಯವಹಾರವುಳ್ಳ ವ್ಯಾಪಾರಸ್ಥರು.

(೨) ರೂ. ೨೦,೦೦೦ ಕ್ಕಿಂತ ಹೆಚ್ಚು, ರೂ. ೪೦,೦೦೦ ಕ್ಕಿಂತ ಕಡಿಮೆ ವಾರ್ಷಿಕ ವ್ಯವಹಾರವುಳ್ಳ ವ್ಯಾಪಾರಸ್ಥರು.

(೩) ರೂ. ೪೦,೦೦೦ ಕ್ಕಿಂತ ಹೆಚ್ಚು ವಾರ್ಷಿಕ ವ್ಯವಹಾರವುಳ್ಳ ವ್ಯಾಪಾರಸ್ಥರು.

೧ ನೇ ವರ್ಗದಲ್ಲಿ ಬರುವ ವ್ಯಾಪಾರಸ್ಥರಿಗೆ ಈ ಕಾಯ್ದೆಯನ್ವಯ ಕೊಡಬೇಕಾದ ಕರದ ಬದಲು ೧೭ ನೇ ಕಲಮಿನಲ್ಲಿ ನಮೂದಿಸಿದಂತೆ ರಾಜಿಯ ಹಣವನ್ನು ತುಂಬಲು ಅವಕಾಶವಿರುವದು. ಅಂಥ ವ್ಯಾಪಾರಿಯು ಉತ್ಪಾದಕ

ನಿದ್ದರೆ ಅವನ ವರ್ಷದ ಉತ್ಪಾದನೆಗೆ ಬೇಕಾಗುವ ಒಟ್ಟು ಕಚ್ಚಾ ಮಾಲಿನ ಖರೀದಿಯ ಮೇಲೆ ನೂರಕ್ಕೆ ೧೫ ರಷ್ಟು ಮತ್ತು ಇತರ ಯಾವದೇ ವ್ಯಾಪಾರಸ್ಥನ ಒಟ್ಟು ಖರೀದಿಯ ಮೇಲೆ ೧೦೦ ಕ್ಕೆ ೧೦ ರಷ್ಟು ಹೆಚ್ಚಿಸಿ ಇಂಥ ರಾಜಿಯ ಹಣವು ನಿರ್ಧರಿಸಲ್ಪಡುವದು. ಇಂಥ ವ್ಯಾಪಾರಿಯು (ಅಂದರೆ ರಾಜಿಯ ಹಣವನ್ನು ತುಂಬಲು ಅಧಿಕೃತನಾಗಿದ್ದರೆ) ತನ್ನ ವ್ಯವಹಾರದ ಲೆಕ್ಕಪತ್ರವನ್ನು ಮಾಲಿನ ತಪಶೀಲಿನೊಂದಿಗೆ ಇಡದೆ, ಖರೀದಿಯ ವ್ಯವಹಾರವನ್ನಷ್ಟೇ ವಿವರವಾಗಿ ಇಟ್ಟರೆ ಸಾಕು. ರಾಜಿಯ ಹಣವನ್ನು ತುಂಬಲು ಅಧಿಕೃತನಾದ ವ್ಯಾಪಾರಿಯು ತನ್ನ ಖರೀದಿ ಇಲ್ಲವೆ ವಿಕ್ರಿಯ ಮೇಲೆ ಕರವನ್ನು ವಸೂಲು ಮಾಡಲು ಬರುವದಿಲ್ಲ. ಅವನು ತನ್ನ ವ್ಯವಹಾರದ ವಿವರವನ್ನು ೪ ನೇ ನಂಬರ ಫಾರ್ಮಿನ ಬದಲು ೯ ನೇ ನಂಬರ ಫಾರ್ಮಿನಲ್ಲಿ ಒಪ್ಪಿಸತಕ್ಕದ್ದು. ಇಂಥ ರಾಜೀ ಹಣವನ್ನು ತುಂಬಲು ಅಧಿಕೃತನಾಗಲು ೮ ನೇ ನಂಬರಿನ ಫಾರ್ಮಿನಲ್ಲಿ ತನ್ನ ಹದ್ದಿನಲ್ಲಿಯ ಕರಾಕರಣೆಯ ಅಧಿಕಾರಿಯ ಕಡೆಗೆ ಅರ್ಜಿಯನ್ನು ಮಾಡಿಕೊಳ್ಳಬೇಕು.

೨ ನೇ ವರ್ಗದಲ್ಲಿ ಬರುವ ವ್ಯಾಪಾರಸ್ಥರು ತಮ್ಮ ಪ್ರತಿಯೊಂದು ಸರಕಿನ ಖರೀದಿ ಹಾಗೂ ವಿಕ್ರಿಯ ವ್ಯವಹಾರವನ್ನು ವಿವರವಾಗಿ ಇಡಬೇಕು.

(i) ಇಂಥ ವ್ಯಾಪಾರಿಯು ತಾನು ಕೊಡತಕ್ಕ ಖರೀದಿ ಮತ್ತು ವಿಕ್ರಿಯ ಮೇಲಿನ ಕರವನ್ನು ನಿರ್ದಿಷ್ಟ ಪಡಿಸಿದ ದರದಂತೆ ವಸೂಲು ಮಾಡಲು ಬರುತ್ತದೆ. ಹೀಗೆ ವಸೂಲು ಮಾಡಿದ ಕರದಲ್ಲಿ ತಾನು ತಾತ್ಪೂರ್ತಿಕವಾಗಿ ಈ ಮೊದಲೇ ಸರಕಾರಕ್ಕೆ ಸಲ್ಲಿಸಿದ ಕರವನ್ನು ವಜಾ ಮಾಡಿ ಉಳಿದ ಹೆಚ್ಚಿನ ಹಣವನ್ನು ವರ್ಷಾಂತ್ಯದ ನಂತರ ೩೦ ದಿವಸಗಳ ಒಳಗಾಗಿ ತುಂಬಬೇಕು.

(ii) ಪ್ರತಿ ವ್ಯವಹಾರಕ್ಕೂ ಕ್ಯಾಶಮೆಮೋ ಅಥವಾ ಬಿಲ್ಲನ್ನು ಗಿರಾಕಿಗಳಿಗೆ ಕೊಡಬೇಕು.

(iii) ಒಂದು ವರ್ಷದ ಒಟ್ಟು ವ್ಯವಹಾರದ ಮತ್ತು ಕರಕ್ಕೆ ಪಾತ್ರವಿದ್ದ ವ್ಯವಹಾರದ ಲೆಕ್ಕವನ್ನು ೪ ನೇ ನಂಬರ ಫಾರ್ಮಿನಲ್ಲಿ ತನ್ನ ಹದ್ದಿನಲ್ಲಿರುವ ಕರಾಕರಣೆಯ ಅಧಿಕಾರಿಗೆ ಈ ಕಾಯ್ದೆಯು ಜಾರಿಯಲ್ಲಿ ಬಂದ ತೊಂಬತ್ತು ದಿವಸಗಳೊಳಗಾಗಿ, ಅಥವಾ ಹೊಸದಾಗಿ ಕರಕ್ಕೆ ಪಾತ್ರನಾಗುವ ವ್ಯಾಪಾರಿಯು ಕರಕ್ಕೆ ಪಾತ್ರನಾದಂದಿನಿಂದ ೩೦ ದಿವಸಗಳೊಳಗಾಗಿ ಪತ್ರಕವನ್ನು, ಒಪ್ಪಿಸಬೇಕು.

(iv) ಈ ಪತ್ರಕವನ್ನು ಸಾದರ ಪಡಿಸಿದ ಮೇಲೆ ತಾತ್ಪೂರ್ತಿಕ ಕರಾಕರಣೆ ಆದ ಬಳಿಕ ಪ್ರತಿತಿಂಗಳಿನಲ್ಲೂ ಕರಾಕರಣೆಯ ಅಧಿಕಾರಿಯು ನಿರ್ದಿಷ್ಟ ಪಡಿಸಿದ ಹಣವನ್ನು ತುಂಬುತ್ತಹೋಗಬೇಕು.

(v) ಮೇಲೆ ಹೇಳಿದ ಪತ್ರಕವನ್ನು ಸಾದರ ಪಡಿಸುವಾಗ ಕಳೆದ ವರ್ಷದ ವ್ಯವಹಾರದ ಆಧಾರದ ಮೇಲೆ ಬರುವ ವರ್ಷದ ವ್ಯವಹಾರದ ಅಂದಾಜು ಕಟ್ಟಿ ಆ ಪ್ರಕಾರ ಪತ್ರಕ ತುಂಬಬೇಕು.

(vi) ಈ ವರ್ಗದಲ್ಲಿ ಬರುವ ವ್ಯಾಪಾರಸ್ಥರಿಗೆ ತ್ರೈಮಾಸಿಕ ಪತ್ರಕವನ್ನು ತುಂಬಲು ಅಧಿಕಾರವಿಲ್ಲ. ತ್ರೈಮಾಸಿಕ ಕರವನ್ನು ತುಂಬಲು ಕರಾಕರಣೆಯ ಅಧಿಕಾರಿಗೆ ಅರ್ಜಿ ಮಾಡಿಕೊಂಡಾಗ ಮತ್ತು ಹಾಗೆ ತ್ರೈಮಾಸಿಕ ಕರವನ್ನು ತುಂಬಲು ಅರ್ಹತೆಯನ್ನು ಪಡೆದಾಗ ತ್ರೈಮಾಸಿಕಕ್ಕೊಮ್ಮೆ ಕರವನ್ನು ತುಂಬಲು ಬರುತ್ತದೆ.

(vii) ಈ ವರ್ಗದಲ್ಲಿ ಬರುವ ಎಲ್ಲ ವ್ಯಾಪಾರಸ್ಥರು ತಮ್ಮ ಹದ್ದಿನಲ್ಲಿರುವ ಅಸಿಸ್ಟಂಟ ಕಮರ್ಶಿಯಲ್ ಟ್ಯಾಕ್ಸ ಆಫೀಸರರ ಅಧಿಕಾರ ಕಕ್ಷೆಯಲ್ಲಿ ಬರುತ್ತಾರೆ.

(viii) ಸಂಬಂಧಿಸಿದ ಅಸಿಸ್ಟಂಟ ಕಮರ್ಶಿಯಲ್ ಟ್ಯಾಕ್ಸ ಆಫೀಸರನು ತಾತ್ಪೂರ್ತಿಕ ಕರಾಕರಣೆಯಾದ ವರ್ಷದಬಗ್ಗೆ ಆ ವರ್ಷದ ಕರಾಕರಣೆಯನ್ನು ವರ್ಷ ಮುಗಿದ ಮೇಲೆ ಕೊನೆಯದಾಗಿ ನಿರ್ಧರಿಸುವನು. ಇಂಥ ಕೊನೆಯದಾಗಿ ನಿರ್ಧರಿಸಲ್ಪಟ್ಟ ಕರಾಕರಣೆಯ ರಕಮು ವ್ಯಾಪಾರಸ್ಥನು ತಾತ್ಪೂರ್ತಿಕ ಕರಾಕರಣೆಯನ್ವಯ ತುಂಬಿದ ಕರದ ಹಣಕ್ಕಿಂತ ಹೆಚ್ಚಾಗಿದ್ದರೆ, ಅಂಥ ಹೆಚ್ಚಿನ ಕರವನ್ನು ತುಂಬಬೇಕಾಗುವದು. ಇಂಥ ತಾತ್ಪೂರ್ತಿಕ ಕರಾಕರಣೆಯ ಕರವು ಹೆಚ್ಚಿಗೆ ತುಂಬಿದ್ದರೆ ಅದನ್ನು ಮರಳಿ ಪಡೆಯಬಹುದು.

೩. ಮೂರನೆಯ ವರ್ಗದಲ್ಲಿ ಬರುವ ವ್ಯಾಪಾರಸ್ಥರಿಗೆ ೨ ನೆಯ ವರ್ಗದವರಿಗಾಗಿ ಮೇಲ್ಕಾಣಿಸಿದ ಎಲ್ಲ ನಿಯಮಗಳು ಅನ್ವಯಿಸುವವು. ಆದರೆ ಇಂಥ ವ್ಯಾಪಾರಿಗಳಿಗೆ ಕೆಲವು ಬೇರೆ ರಿಯಾಯತಿಗಳೂ ದೊರೆಯುವವು. ಅವು ಯಾವವೆಂದರೆ :—

(೧) ತಾತ್ಪೂರ್ತಿಕ ವರ್ಷದ ಲೆಕ್ಕದ ವರದಿಯ ಪತ್ರಕದ ಬದಲಾಗಿ ತ್ರೈಮಾಸಿಕ ವರದಿಗಳನ್ನು ಸಲ್ಲಿಸಲು ತಮ್ಮ ಇಚ್ಛೆಯಂತೆ ಅವರು ಆರಿಸಿಕೊಳ್ಳಬಹುದು. ಹೀಗೆ ತ್ರೈಮಾಸಿಕ ಪತ್ರಿಕೆಗಳನ್ನು ಸಲ್ಲಿಸಲು ಆರಿಸಿಕೊಂಡ ವ್ಯಾಪಾರಸ್ಥರು ಕಳೆದ ಮೂರು ತಿಂಗಳಲ್ಲಿ ಆದ ವ್ಯವಹಾರದ ಮತ್ತು ವಸೂಲು ಮಾಡಿದ ಕರದ ಹಣದ ವಿವರಗಳನ್ನು ಆ ತ್ರೈಮಾಸಿಕ ಅವಧಿಯು ಮುಗಿದ ಮೂವತ್ತು ದಿವಸಗಳೊಳಗಾಗಿ ೪ ನೇ ನಂಬರ ಫಾರ್ಮಿನಲ್ಲಿ ಸಾದರಪಡಿಸತಕ್ಕದ್ದು, ಹಾಗೂ ಪತ್ರಿಕೆಯ ಜೊತೆಗೆ ಕರವನ್ನು ತುಂಬಿದ ಬಗ್ಗೆ ದಾಖಲೆಯನ್ನು ಜೋಡಿಸಬೇಕು.

ಇಂಥ ತ್ರೈಮಾಸಿಕ ಪತ್ರಿಕೆಗಳು ಬಂದ ಮೇಲೆ ಕರಾಕರಣೆಯ ಅಧಿಕಾರಿಯು ಅವು ಸರಿಯಿಲ್ಲವೆಂದು ಕಂಡು ಬಂದಲ್ಲಿ ತಾತ್ಪೂರ್ತಿಕವಾಗಿ ಕರಾಕರಣೆಯ ಹಣವನ್ನು ನಿರ್ಧರಿಸಬಹುದು.

ಮೇಲ್ಕಾಣಿಸಿದ ಮೂರು ವರ್ಗಗಳ ವ್ಯಾಪಾರಸ್ಥರು ತಮ್ಮ ಲೆಕ್ಕದ ವರ್ಷಕ್ಕನುಸಾರವಾಗಿ ಕರಾಕರಣೆಯ ವರ್ಷವನ್ನು ಆರಿಸಿಕೊಳ್ಳಬಹುದು. ಹೀಗೆ ಆರಿಸಿಕೊಳ್ಳದವರ ಮೇಲೆ ಎಪ್ರಿಲದಿಂದ ಮಾರ್ಚದ ವರೆಗಿನ ವರ್ಷವನ್ನು ಹಿಡಿದು ಕರಾಕರಣೆ ಮಾಡಲಾಗುವದು.

## ೯. ಪರಪ್ರಾಂತದ ವ್ಯಾಪಾರಸ್ಥರು ಹಾಗೂ ಕಮಿಶನ್ ಏಜಂಟರು.

ಮೈಸೂರು ರಾಜ್ಯದ ರಹವಾಸಿಯಲ್ಲದಂಥ ಪರಪ್ರಾಂತದ ಯಾವದೇ ವ್ಯಾಪಾರಸ್ಥನು ಮೈಸೂರ ರಾಜ್ಯದಲ್ಲಿ ತನ್ನ ಏಜಂಟ ಅಥವಾ ಮ್ಯಾನೇಜರನ ಮುಖಾಂತರ ಸರಕುಗಳ ಕೊಡಕೊಳ್ಳುವ ವ್ಯವಹಾರಮಾಡುತ್ತಿದ್ದರೆ, ಈ ಕಾಯ್ದೆಯ ಎಲ್ಲ ಕಲಮುಗಳು ಕೆಲವೊಂದು ಬದಲಾವಣೆಯೊಂದಿಗೆ ಅಂಥ ಕೊಡಕೊಳ್ಳುವ ವ್ಯವಹಾರಕ್ಕೆ ಅನ್ವಯಿಸುವವು. ಅಂಥ ಬದಲಾವಣೆ ಯಾವವೆಂದರೆ:—

(೧) ಪರಪ್ರಾಂತದ ವ್ಯಾಪಾರಸ್ಥನ ಪರವಾಗಿ ವ್ಯವಹಾರ ನಡಿಸುವ ಈ ರಾಜ್ಯದ ಏಜಂಟನು ಅಥವಾ ಮ್ಯಾನೇಜರನು ಅಂಥ ವ್ಯವಹಾರದ ಸಲುವಾಗಿ ವ್ಯಾಪಾರಸ್ಥನೆಂದು ಗಣಿಸಲ್ಪಡುತ್ತಾನೆ.

(೨) ಅಂಥ ಏಜಂಟ ಅಥವಾ ಮ್ಯಾನೇಜರನು ಆ ವ್ಯವಹಾರದ ಮೇಲೆ ಈ ಕಾಯ್ದೆಯನ್ವಯ ಆಕರಿಸಿದ ದರದಂತೆ ಕೊಡಬೇಕಾದ ಕರದ ಮೊತ್ತವನ್ನು ನಿರ್ಧರಿಸಬಹುದು. ಹೀಗೆ ಆಕರಣೆಯನ್ನು ನಿರ್ಧರಿಸುವಾಗ ಅಂಥ ವ್ಯವಹಾರದ ಖರೀದಿ ಅಥವಾ ವಿಕ್ರಿಯ ಮೊತ್ತವು ವರ್ಷಕ್ಕೆ ರೂ. ೭೫೦೦ ಕ್ಕೆ ಮಿಕ್ಕಲೇಬೇಕೆಂಬ ನಿಯಮವಿಲ್ಲ. ಅಂದರೆ ಈ ರಾಜ್ಯದಲ್ಲಿಯ ವ್ಯಾಪಾರಸ್ಥರು ಕರ ಕೊಡಲು ಪಾತ್ರರಾಗಬೇಕಾದರೆ ಅವರ ಖರೀದಿ ಇಲ್ಲವೆ ವಿಕ್ರಿಯ ವ್ಯವಹಾರದ ಮೊತ್ತವು ರೂ ೭.೫೦೦ಕ್ಕೆ ಮಿಕ್ಕಬೇಕೆನ್ನುವ ನಿಯಮಕ್ಕೆ ಇದು ಅಪವಾದವಾಗಿದೆ. ಆದ್ದರಿಂದ ಈ ರಾಜ್ಯದ ರಹವಾಸಿಯಲ್ಲದ ವ್ಯಾಪಾರಸ್ಥನು ತನ್ನ ಏಜಂಟ ಅಥವಾ ಮ್ಯಾನೇಜರನ ಮುಖಾಂತರವಾಗಿ ಈ ರಾಜ್ಯದಲ್ಲಿ ಮಾಡುವ ವ್ಯವಹಾರದ ಸಲುವಾಗಿ ಅವನ ಕರ ಕೊಡುವ ಪಾತ್ರತೆಯನ್ನು ನಿರ್ಧರಿಸುವಾಗ ಖರೀದಿ ಅಥವಾ ವಿಕ್ರಿಯ ವ್ಯವಹಾರವು ವರ್ಷಕ್ಕೆ ರೂ. ೭,೫೦೦ಕ್ಕೆ ಮಿಕ್ಕಲೇಬೇಕೆಂಬ ನಿಯಮ ಇಲ್ಲಿ ಅನ್ವಯಿಸುವದಿಲ್ಲ.

(೩) ಈ ರಾಜ್ಯದ ರಹವಾಸಿಯಲ್ಲದ ಇಂಥ ವ್ಯಾಪಾರಸ್ಥನ ಏಜಂಟ ಅಥವಾ ಮ್ಯಾನೇಜರನಿಗೆ ಅಂಥ ವ್ಯವಹಾರದ ಮೇಲೆ ತಾನು ಕೊಡಬೇಕಾದ ಕರವನ್ನು ಆ ವ್ಯಾಪಾರಸ್ಥನಿಂದ ವಸೂಲು ಮಾಡಲು ಅಧಿಕಾರವಿರುತ್ತದೆ.

ಪರಪ್ರಾಂತದ ವ್ಯಾಪಾರಸ್ಥನ ಏಜಂಟ ಅಥವಾ ಮ್ಯಾನೇಜರನು ಈ ಕಾಯ್ದೆಯನ್ವಯ ಪಡೆಯಬೇಕಾದ ಲಾಯಸನ್ಸನ್ನು ಪಡೆದುಕೊಳ್ಳಲು ಈ ಕಾಯ್ದೆಯು ಜಾರಿಯಲ್ಲಿ ಬಂದ ತೊಂಬತ್ತು ದಿವಸಗಳೊಳಗಾಗಿ ಇಲ್ಲವೆ ವ್ಯವಹಾರವನ್ನು ಪ್ರಾರಂಭಿಸಿದ ೧೫ ದಿವಸಗಳಲ್ಲಿ ತನ್ನ ಹದ್ದಿನಲ್ಲಿರುವ ಕರಾಕರಣೆಯ ಅಧಿಕಾರಿಗೆ ೧೮ ನೇ ನಂಬರಿನ ಫಾರ್ಮಿನಲ್ಲಿ ಅರ್ಜಿಯನ್ನು ಮಾಡಿಕೊಳ್ಳತಕ್ಕದ್ದು.

## ೧೦ ಕಮಿಶನ ಏಜಂಟ.

ಕಮಿಶನ ಏಜಂಟರು (ದಲಾಲಿ ವ್ಯಾಪಾರಸ್ಥರು) ಕಮಿಶನ್ ಮೇಲೆ ಮಾಡಿದ ಖರೀದಿ ಅಥವಾ ವಿಕ್ರಿಯು ವ್ಯವಹಾರವು ಈ ಕಾಯ್ದೆಯ ೧೧ ನೇ ಕಲಮಿನ ಪ್ರಕಾರ ಕರಕ್ಕೆ ಪಾತ್ರವಾಗುವದಿಲ್ಲ. ಆದರೆ ಆ ಸರಕುಗಳ ಮಾಲಕರು ಇಂಥ ಖರೀದಿ ಅಥವಾ ವಿಕ್ರಿಯ ಬಗ್ಗೆ ಕರ ಕೊಡಲು ಪಾತ್ರರಾಗುತ್ತಾರೆ. ಅಂಥ ಪ್ರಸಂಗದಲ್ಲಿ ಕಮಿಶನ ಏಜಂಟರು ಆ ಕರವನ್ನು ಕೊಡಬೇಕಾಗುವದು. ಇಂಥ ಕರವನ್ನು ಕಮಿಶನ ಏಜಂಟರು ಕೊಟ್ಟಿದ್ದರೆ ಮಾಲಕರಿಗೆ ಪುನಃ ಅದರ ಬಗ್ಗೆ ಕರವನ್ನು ಕೊಡಬೇಕಾಗುವದಿಲ್ಲ ಆದರೆ ಇಂಥ ಕರವನ್ನು ಕಮಿಶನ ಏಜಂಟರು ಕೊಟ್ಟಿರುವ ಬಗ್ಗೆ ಖಾತ್ರಿ ಮಾಡಿಕೊಡುವ ಜವಾಬದಾರಿಯು ಸರಕುಗಳ ಮಾಲಕರ ಮೇಲೆ ಇರುತ್ತದೆ.

ಕಮಿಶನ ಏಜಂಟರು ವ್ಯವಹಾರ ಮಾಡುವಾಗ ಖರೀದಿ ಅಥವಾ ವಿಕ್ರಿಯ ಬೆಲೆಯನ್ನು ಆ ಸರಕುಗಳ ಮಾಲಕರಿಗೆ ಸಲ್ಲಿಸುವಾಗ ತಾವು ಖರೀದಿ ಅಥವಾ ವಿಕ್ರಿ ಮಾಡಿದ ದರದಿಂದಲೇ ಎಲ್ಲ ಲೆಕ್ಕವನ್ನು ಒಪ್ಪಿಸಿದರೆ ಮಾತ್ರ ೧೧ ನೇ ಕಲಮಿನ ಪ್ರಕಾರ ಆ ಏಜಂಟರ ವಿಕ್ರಿಯು ಕರ ಮುಕ್ತವಾಗುತ್ತದೆ. ಇಲ್ಲದಿದ್ದರೆ ಕಾಯ್ದೆಯಲ್ಲಿ ಕಾಣಿಸಿದ ಮಾರಾಟದ ವ್ಯಾಖ್ಯೆಯ ಪ್ರಕಾರ ಆ ಖರೀದಿ ಮತ್ತು ವಿಕ್ರಿಗಳು ಏಜಂಟರವೇ ಎಂದು ತಿಳಿದು ಕರ ಹೇರಲಾಗುವದು.

ಯಾವ ಯಾವ ಪ್ರಸಂಗಗಳಲ್ಲಿ ಕಮಿಶನ ಏಜಂಟರು ಮಾಲಕರ ವತಿಯಿಂದ ಕರ ಕೊಡಬೇಕಾಗುವದೆಂಬುದನ್ನು ಈ ಕೆಳಗಿನ ಉದಾಹರಣೆಗಳಿಂದ ತಿಳಿದುಕೊಳ್ಳಬಹುದು.

**ಉದಾಹರಣೆ:—** (೧) ಈ ರಾಜ್ಯದಲ್ಲಿಯ 'ಅ' ಎಂಬ ಒಬ್ಬ ಒಕ್ಕಲಿಗನು ತನ್ನ ಹುಟ್ಟುವಳಿಯನ್ನು 'ಬ' ಎಂಬ ಕಮಿಶನ ಏಜಂಟನ ಕಡೆಗೆ ಮಾರಲು ಹಚ್ಚಿದಾಗ 'ಬ' ನು 'ಅ' ನ ವಿಕ್ರಿದಾರ ಕಮಿಶನ್ ಏಜಂಟನೆಂದು ವಿಕ್ರಿ ಮಾಡುತ್ತಾನೆ. ಅಂಥ ಪ್ರಸಂಗದಲ್ಲಿ ಕರವನ್ನು ಕೊಡುವ ಪಾತ್ರತೆ 'ಅ' ನ ಮೇಲೆ ಇರುತ್ತದೆ. ಆದರೆ 'ಅ' ನು ತನ್ನ ಸ್ವಂತ ಹುಟ್ಟುವಳಿಯನ್ನು ಮಾರುವ ಒಕ್ಕಲಿಗನಿರುವ ಮೂಲಕ ಅವನು ಕರ ಕೊಡಬೇಕಾಗುವದಿಲ್ಲ. ಆದ್ದರಿಂದ ಕಮಿಶನ್ ಏಜಂಟನಾದ 'ಬ' ನಿಗೂ ಕರ ಕೊಡುವ ಪಾತ್ರತೆ ಬರುವದಿಲ್ಲ. ( ಇದೇ ಪ್ರಕಾರ ಈ ರಾಜ್ಯದಲ್ಲಿಯ ಒಬ್ಬ ವ್ಯಾಪಾರಿಯು ವ್ಯವಹಾರದ ಮೊತ್ತವು ವರ್ಷಕ್ಕೆ ರೂ. ೭,೫೦೦ ಕ್ಕೂ ಕಡಿಮೆಯಿದ್ದಲ್ಲಿ ಅಂಥವನ ಸರಕುಗಳನ್ನು ಮಾರಿದಾಗ್ಯೂ ಕಮಿಶನ್ ಏಜಂಟನು ಕರ ಕೊಡಬೇಕಾಗುವದಿಲ್ಲ. ಆದರೆ ಇಂಥ ವ್ಯಾಪಾರಿಯು ಕರ ಕೊಡಲು ಪಾತ್ರತೆಯುಳ್ಳವನಿದ್ದರೆ ಅವನ ಕರವನ್ನು ಕಮಿಶನ್ ಏಜಂಟನು ಕೊಡಬೇಕಾಗುತ್ತದೆ ).

(೨) ಪರಪ್ರಾಂತದಲ್ಲಿಯ ವ್ಯಾಪಾರಿಯು, ಗ್ರಾಹಕನು, ಇಲ್ಲವೆ ಒಕ್ಕಲಿಗನು ತನ್ನ ಸರಕುಗಳನ್ನು ತಂದು ಈ ರಾಜ್ಯದಲ್ಲಿಯ ಕಮಿಶನ್ ಏಜಂಟನಲ್ಲಿ ವಿಕ್ರಿಯ ದೆಶೆಯಿಂದ ಹಚ್ಚಿದಾಗ್ಗೆ, ಈ ಎಲ್ಲ ವಿಕ್ರಿಯ ಮೇಲೆ ಕಮಿಶನ್ ಏಜಂಟನು ಕಾಯ್ದೆಯ ಪ್ರಕಾರ ಕರ ಕೊಡಬೇಕಾಗುವದು. ಇಂಥ ಕರವನ್ನು ಕಮಿಶನ್ ಏಜಂಟನು ವಸೂಲು ಮಾಡಬಹುದು ಇದರಂತೆ ರಾಜ್ಯದಲ್ಲಿಯ ಮತ್ತೊಬ್ಬ ಕರಕ್ಕೆ ಪಾತ್ರತೆಯುಳ್ಳ ವ್ಯಾಪಾರಿಯ ಸರಕುಗಳನ್ನು ಕಮಿಶನ್ ಏಜಂಟನು ವಿಕ್ರಿ ಮಾಡಿದಾಗ್ಗೆ ಇಂಥ ವಿಕ್ರಿಯ ಮೇಲೆ ಅವನು ಕರ ಕೊಡಬೇಕಾಗುವದು.

(೩) ತನ್ನ ಮಾಲಕನ ಸಲುವಾಗಿ ಕಮಿಶನ್ ಏಜಂಟನು ಖರೀದಿ ಮಾಡುವಾಗ ಅದು ಅವನ ಖರೀದಿಯೇ ಆಗುತ್ತದೆ. ಆದರಿಂದ ಅಂಥ ಖರೀದಿ ಕಮಿಶನ್ ಏಜಂಟನಿಂದ ಮಾಲಕನಿಗೆ ಮಾರಾಟವೆಂದು ಗಣಿಸಲ್ಪಡುವದಿಲ್ಲ. ಈ ಕಾರಣದಿಂದ ಪ್ರತಿಯೊಂದು ಮಾರಾಟಕ್ಕೂ ಕರಕ್ಕೆ ಪಾತ್ರವಿದ್ದ ಸರಕುಗಳನ್ನು ಕಮಿಶನ್ ಏಜಂಟನು ಖರೀದಿ ಮಾಡಿದಾಗ ಆದರ ಮೇಲೆ ಕರ ಬೀಳುವದಿಲ್ಲ. ಇಂಥ ಮಾಲಕನು ರಾಜ್ಯದೊಳಗಿನ ಇಲ್ಲವೆ ರಾಜ್ಯದ ಹೊರಗಿನ ಗ್ರಾಹಕನಿರಲಿ, ಇಲ್ಲವೆ ವ್ಯಾಪಾರಿಯಿರಲಿ, ಇಲ್ಲವೆ ಒಕ್ಕಲಿಗನಿರಲಿ, ಕರ ಕೊಡುವ ಪಾತ್ರತೆ ಯಾರ ಮೇಲೆಯೂ ಬರುವದಿಲ್ಲ.

(೪) 'ಅ' ನು ಒಬ್ಬ ಒಕ್ಕಲಿಗ ಇಲ್ಲವೆ ಕರ ಕೊಡಲು ಪಾತ್ರತೆಯಿಲ್ಲದ ವ್ಯಾಪಾರಿಯೆನ್ನೋಣ. 'ಬ' ಇಂಥ ಮಾಲಕನ ಸರಕುಗಳನ್ನು ಮಾರಾಟ ಮಾಡುವ ಕಮಿಶನ ಏಜಂಟನು. 'ಕ' ಇವನು ಪರಪ್ರಾಂತದ ಇಲ್ಲವೆ ರಾಜ್ಯದೊಳಗಿನ ವ್ಯಾಪಾರಿಯ ಸಲುವಾಗಿ ಇಲ್ಲವೆ ಗ್ರಾಹಕರ ಸಲುವಾಗಿ ಖರೀದಿಯನ್ನು

ಮಾಡುವ ಕಮಿಶನ್ ಏಜಂಟನು. 'ಡ' ನು ಪ್ರಾಂತದ ಅಥವಾ ಪರಪ್ರಾಂತದ ಮೂಲಕ. 'ಅ' ನು ತನ್ನ ಸರಕುಗಳನ್ನು 'ಬ' ನ ಕಡೆಗೆ ಮಾರಾಟದ ಸಲುವಾಗಿ ತಂದಾಗ, 'ಕ' ಖರೀದಿಯ ಏಜಂಟನು ಆ ಸರಕುಗಳನ್ನು 'ಡ' ನ ಸಲುವಾಗಿ 'ಬ' ನ ಕಡೆಯಿಂದ ಖರೀದಿ ಮಾಡಿದ ಪ್ರಸಂಗದಲ್ಲಿ ಯಾವ ಹಂತದಲ್ಲಿಯೂ ವಿಕ್ರಿ ಕರಕ್ಕೆ ಪಾತ್ರವಿದ್ದ ಸರಕುಗಳ ಮೇಲೆ ಅಂಥ ಕರ ಬೀಳುವದಿಲ್ಲ.

ಆದರೆ ಖರೀದಿ ಕರಕ್ಕೆ ಪಾತ್ರವಿದ್ದ ಸರಕುಗಳ ಮೇಲೆ, ಖರೀದಿ ಮಾಡುವ ಕಮಿಶನ್ ಏಜಂಟನು ಮಾತ್ರ ತನ್ನ ಮಾಲಕನ ದೆಶೆಯಿಂದ ಆ ಹಂತದಲ್ಲಿ ಕೊಡುವ ಪ್ರಸಂಗವಿದ್ದರಷ್ಟೇ ಖರೀದಿ ಕರ ಕೊಡಬೇಕಾಗುವದು.

## ೧೧. ಮಾರಾಟಕರದ ಅಧಿಕಾರಿಗಳು ಹಾಗೂ ಅವರ ಅಧಿಕಾರದ ವ್ಯಾಪ್ತಿ.

ಈ ಕಾಯ್ದೆಯ ಅಮಲ ಬಜಾವಣೆಗಾಗಿ ಕಮಿಶನರ ಆಫ್ ಕಮರ್ಶಿಯಲ್ ಟ್ಯಾಕ್ಸೆಸ್ (ವಾಣಿಜ್ಯ ಕರಗಳ ಕಮಿಶನರ), ಡೆಪ್ಯುಟಿ ಕಮಿಶನರ ಆಫ್ ಕಮರ್ಶಿಯಲ್ ಟ್ಯಾಕ್ಸೆಸ್ (ವಾಣಿಜ್ಯ ಕರಗಳ ಡೆಪ್ಯುಟಿ ಕಮಿಶನರ), ಇನ್ಸ್ಪೆಕ್ಟಿಂಗ ಆಫೀಸರ, ಕಮರ್ಶಿಯಲ್ ಟ್ಯಾಕ್ಸ ಆಫೀಸರ (ವಾಣಿಜ್ಯ ಕರಗಳ ಅಧಿಕಾರಿ), ಅಸಿಸ್ಟಂಟ ಕಮರ್ಶಿಯಲ್ ಟ್ಯಾಕ್ಸ ಆಫೀಸರ (ವಾಣಿಜ್ಯ ಕರಗಳ ಸಹಾಯಕ ಅಧಿಕಾರಿ) ಎಂಬ ಬೇರೆ ಬೇರೆ ವರ್ಗಗಳ ಅಮಲದಾರ (ಅಧಿಕಾರಿ) ರನ್ನು ಸರಕಾರವು ನೇಮಿಸಿರುವದು.

ಅಸಿಸ್ಟಂಟ ಕಮರ್ಶಿಯಲ್ ಟ್ಯಾಕ್ಸ ಆಫೀಸರನ ಅಧಿಕಾರ ವ್ಯಾಪ್ತಿಯು ಅವನನ್ನು ನೇಮಿಸಿದ ಸಬ್-ಸರ್ಕಲಿಗೆ ಒಳಪಡುತ್ತದೆ. ಅವನು ತನ್ನ ಹದ್ದಿನಲ್ಲಿ ಇರುವ ರೂ· ೪೦,೦೦೦/– ಕ್ಕೆ ಮಿಕ್ಕದ ವ್ಯವಹಾರವುಳ್ಳ ವ್ಯಾಪಾರಸ್ಥರ ಲೆಕ್ಕದ ತಪಾಸಣಿ, ಕರಾಕರಣೆ, ನೋಂದಣಿ, ಲಾಯಸನ್ಸ ಕೊಡುವದು, ಮತ್ತು ಕರ ವಸೂಲು ಮಾಡುವದು ಇವೆಲ್ಲಕ್ಕೂ ಹಾಗೂ ಇವುಗಳಿಗೆ ಸಂಬಂಧಿಸಿದ ಕ್ರಮ ತೆಗೆದುಕೊಳ್ಳಲೂ ಅಧಿಕಾರವುಳ್ಳವನಿರುತ್ತಾನೆ.

ಕಮರ್ಶಿಯಲ್ ಟ್ಯಾಕ್ಸ ಆಫೀಸರನ ಅಧಿಕಾರ ವ್ಯಾಪ್ತಿಯು ಅವನನ್ನು ನೇಮಿಸಿದ ಸರ್ಕಲಿಗೆ ಸೀಮಿತವಾಗಿರುತ್ತದೆ. ಅವನು ತನ್ನ ಹದ್ದಿನಲ್ಲಿರುವ ರೂ.೪೦,೦೦೦ ಕ್ಕೆ ಮಿಕ್ಕಿದ ವಾರ್ಷಿಕ ವ್ಯವಹಾರವುಳ್ಳ ವ್ಯಾಪಾರಸ್ಥರ ಲೆಕ್ಕವನ್ನು ತಪಾಸಿಸುವದು;

ನೋಂದಾಯಿಸುವದು, ಕರಾಕರಣೆ ಮಾಡುವದು, ಲಾಯಸನ್ಸ ಕೊಡುವದು, ಕರ ವಸೂಲು ಮಾಡುವದು ಇವುಗಳ ಹಾಗೂ ಇವಕ್ಕೆ ಸಂಬಂಧಿಸಿದ ಕ್ರಮ ತೆಗೆದು ಕೊಳ್ಳುವ ಅಧಿಕಾರವುಳ್ಳವನಿರುತ್ತಾನೆ.

ಇನ್‌ಸ್ಪೆಕ್ಟಿಂಗ ಆಫೀಸರನ ಅಧಿಕಾರ ವ್ಯಾಪ್ತಿಯು ಅವನನ್ನು ನೇಮಿಸಿದ ಡಿವ್ಹಿಜನ್ನಿಗೆ ಸೀಮಿತವಾಗಿರುತ್ತದೆ. ಅವನು ಮೇಲ್ವಿಚಾರಣೆಯ ಅಧಿಕಾರಿಯಾಗಿ ರುವನು. ಅಸಿಸ್ಟಂಟ ಕಮರ್ಶಿಯಲ್ ಟ್ಯಾಕ್ಸ ಆಫೀಸರ ಹಾಗೂ ಕಮರ್ಶಿಯಲ್ ಟ್ಯಾಕ್ಸ್ ಆಫೀಸರರು ಇವನ ಅಧೀನರಿರುತ್ತಾರೆ. ಪರಂತು ಇವನಿಗೆ ಅಪೀಲು ಅಥವಾ ರಿವ್ಹಿಜನ್ನಿನ ಅಧಿಕಾರಗಳು ಇರುವದಿಲ್ಲ ಕಾಯ್ದೆಯ ಪ್ರಕಾರ ೨೭ ನೇ ರೂಲಿನಲ್ಲಿ ಹೇಳಿದಂತೆ 'ಬಿಲ್ ಅಫ್ ಲೇಡಿಂಗ'ದ ಒಂದು ಪ್ರತಿಯನ್ನು ಈ ಅಧಿ ಕಾರಿಗೆ ಕಳಿಸಬೇಕಾಗುತ್ತದೆ. ಈ ಅಧಿಕಾರಿಯು ವಾಣಿಜ್ಯಕರಗಳ ಡೆಪ್ಯುಟಿ ಕಮಿಶನರರ ಅಧೀನವಲ್ಲಿದ್ದು, ಆ ಡಿವ್ಹಿಜನ್ನಿನಲ್ಲಿಯ ವಾಣಿಜ್ಯಕರಗಳ ಕಚೇರಿಗಳನ್ನು ತಪಾಸುಮಾಡುವ ಹಾಗೂ ಕರ ತಪ್ಪಿಸುವ ವ್ಯಾಪಾರಸ್ಥರ ಮೇಲೆ ಯೋಗ್ಯ ಕ್ರಮ ಕೈಕೊಳ್ಳುವ ಅಧಿಕಾರವುಳ್ಳವನಿರುತ್ತಾನೆ.

ಡೆಪ್ಯುಟಿ ಕಮಿಶನರ ಆಫ ಕಮರ್ಶಿಯಲ್ ಟ್ಯಾಕ್ಸೆಸ್ ಇವರ ಅಧಿಕಾರ ಕಕ್ಷೆಯು ಒಂದು ಡಿವಿಜನ್ನಿಗೆ ಸೀಮಿತವಿರುತ್ತದೆ ಇವರಿಗೆ ಅಪೀಲು ಹಾಗೂ ರಿವ್ಹಿ ಜನ್ನಿನ ಅಧಿಕಾರವಿರುತ್ತದೆ ಇದಲ್ಲದೆ ವಾಣಿಜ್ಯಕರಗಳ ಮೇಲ್ವಿಚಾರಣೆಯ ಅಧಿಕಾರವೂ ಇವರಿಗಿರುತ್ತದೆ. ಡಿವ್ಹಿಜನ್ನಿನಲ್ಲಿಯ ಮೇಲೆ ಹೇಳಿದ ಎಲ್ಲ ಅಧಿಕಾರಿ ಗಳೂ ಇವರಿಗೆ ಅಧೀನರಿರುತ್ತಾರೆ.

ಕಮಿಶನರ ಆಫ್ ಕಮರ್ಶಿಯಲ ಟ್ಯಾಕ್ಸೆಸ್ ಇವರು ಇಡೀ ರಾಜ್ಯದ ವಾಣಿ ಜ್ಯಕರಗಳ ಮುಖ್ಯಾಧಿಕಾರಿಗಳಿರುತ್ತಾರೆ. ಇವರಿಗೆ ರಿವ್ಹಿಜನ್ ಅಧಿಕಾರವಿರುತ್ತದೆ. ರಾಜ್ಯದಲ್ಲಿಯ ಎಲ್ಲ ವಾಣಿಜ್ಯಕರಗಳ ಅಧಿಕಾರಿಗಳೂ ಇವರ ಅಧೀನದಲ್ಲಿ ರುತ್ತಾರೆ.

## ೧೨. ಅಪೀಲು ಮತ್ತು ರಿವ್ಹಿಜನ್ನು.

ಅಸಿಸ್ಟಂಟ ಕಮರ್ಶಿಯಲ ಟ್ಯಾಕ್ಸ್ ಆಫೀಸರ ಅಥವಾ ಕಮರ್ಶಿಯಲ್ ಟ್ಯಾಕ್ಸ್ ಆಫೀಸರರು ಈ ಕಾಯ್ದೆಯನ್ವಯ ಮಾಡಿದ ಕರಾಕರಣೆಯ ಆಜ್ಞೆಯ ವಿರುದ್ಧಮಾತ್ರ ಆ ಡಿವ್ಹಿಜನ್ನಿನ ವಾಣಿಜ್ಯಕರಗಳ ಡೆಪ್ಯುಟಿ ಕಮಿಶನರರ ಕಡೆಗೆ ಅಪೀಲು ಮಾಡಿಕೊಳ್ಳುವ ಅಧಿಕಾರವು ವ್ಯಾಪಾರಸ್ಥರಿಗಿರುವದು. ಇಂಥ ಆಜ್ಞೆಯ

ವಿರುದ್ಧ ಅಪೀಲನ್ನು ಆಜ್ಞೆಯು ಮುಟ್ಟಿದ ೩೦ ದಿನಗಳೊಳಗಾಗಿ ೧೫ ನೇ ನಂಬರಿನ ಫಾರ್ಮಿನ ಜೊತೆಯಲ್ಲಿ ಪೂರಾ ಕರವನ್ನು ತುಂಬಿದ ಬಗ್ಗೆ ದಾಖಲೆಯನ್ನು ಇಟ್ಟು ಮಾಡಬೇಕಾಗುವದು. ಆದರೆ ಕೆಲವು ವಿಶೇಷ ಪ್ರಸಂಗಗಳಲ್ಲಿ ಆಜ್ಞೆಯಲ್ಲಿ ವಿಧಿಸಿದ ಕರದ ಭಾಗವನ್ನು ತುಂಬಿದ ನಂತರ ಇಲ್ಲವೇ ಕರವನ್ನು ತುಂಬದೇ ಇದ್ದರೂ ಸಹ, ಅಪೀಲನ್ನು ಸ್ವೀಕರಿಸುವ ಅಧಿಕಾರವು ಡೆಪ್ಯುಟಿ ಕಮಿಶನರರಿಗೆ ಇರುವದು. ಕೆಲವು ಪ್ರಸಂಗಗಳಲ್ಲಿ ೩೦ ದಿವಸಗಳಿಗೆ ಮೀರಿದ ಅವಧಿಯನ್ನು ಕ್ಷಮಿಸಿ ಅಪೀಲನ್ನು ಸ್ವೀಕರಿಸಲೂ ಅವರಿಗೆ ಅಧಿಕಾರವುಂಟು.

ಡೆಪ್ಯುಟಿ ಕಮಿಶನರರು ಈ ಅಪೀಲು ಅರ್ಜಿಯ ಯೋಗ್ಯ ಚೌಕಶಿ ಮಾಡಿ ಅಪೆಲಂಟ (ಅಪೀಲು ಮಾಡಿದವ)ನಿಗೆ ತನ್ನ ವಾದವನ್ನು ಮಂಡಿಸಲು ಯೋಗ್ಯ ಅವಕಾಶವನ್ನು ಕೊಟ್ಟು ಆ ಬಳಿಕ ಅಪೀಲನ್ನು ನಿರ್ಣಯಿಸುವರು.

ಡೆಪ್ಯುಟಿ ಕಮಿಶನರರ ಅಪೀಲಿನ ನಿರ್ಣಯದ ವಿರುದ್ಧ ಅಪಿಲೇಟ ನ್ಯಾಯ ಮಂಡಳಕ್ಕೆ (ಅಪಿಲೆಟ ಟ್ರ್ಯಾಬ್ಯೂನಲ್) ಎರಡನೇ ಅಪೀಲನ್ನು ಮಾಡಿಕೊಳ್ಳಲು ವ್ಯಾಪಾರಸ್ಥರಿಗೆ ಅವಕಾಶವಿದೆ. ಡೆಪ್ಯುಟಿ ಕಮಿಶನರರ ಅಪೀಲು ನಿರ್ಣಯ ಮುಟ್ಟಿದ ೬೦ ದಿವಸಗಳೊಳಗಾಗಿ ೧೮ ನೇ ನಂಬರಿನ ಫಾರ್ಮಿನಲ್ಲಿ ಎರಡನೇ ಅಪೀಲಿನ ನಾಲ್ಕು ಪ್ರತಿಗಳನ್ನು ನ್ಯಾಯಮಂಡಳಕ್ಕೆ ಸಲ್ಲಿಸಬೇಕು. ಈ ಎರಡನೇ ಅಪೀಲಿನ ಜೊತೆಗೆ ಅಪೀಲು ನಿರ್ಣಯದ ಮೂಲ ಇಲ್ಲವೆ ಅಧಿಕೃತ ನಕಲನ್ನೂ ಹಾಗೂ ಮೂಲ ಆಜ್ಞೆಯ ಮೂರು ನಕಲುಗಳನ್ನೂ ಇಡಬೇಕು. ಅಪೀಲ ನಿರ್ಣಯದಂತೆ ತುಂಬಬೇಕಾದ ವಾದಗ್ರಸ್ತ ಕರದ ಹಣದಲ್ಲಿ ಶೇಕಡಾ ೨ ರಂತೆ ಫೀ ಹಣತುಂಬಿದ ಟ್ರೇಝರಿಯ ಚಲನನ್ನೂ ಹಾಜರ ಪಡಿಸಬೇಕು. ಇಂಥ ಫೀ ಹಣವು ೨೦ ರೂಪಾಯಿಗಿಂತ ಕಡಿಮೆ ಹಾಗೂ ೨೦೦ ರೂಪಾಯಿಗಿಂತ ಹೆಚ್ಚು ಇರುವದಿಲ್ಲ. ಅಪೀಲು ನಿರ್ಣಯದ ಪ್ರಕಾರ ತುಂಬತಕ್ಕ ಕರದ ಹಣವನ್ನು ನ್ಯಾಯಮಂಡಳಕ್ಕೆ ಅಪೀಲು ಮಾಡುವ ಪೂರ್ವದಲ್ಲಿ ಪೂರ್ಣವಾಗಿ ತುಂಬಬೇಕಾಗುತ್ತದೆ. ಆದರೆ ಕೆಲವು ಪ್ರಸಂಗಗಳಲ್ಲಿ ಯೋಗ್ಯ ಕಾರಣವಿದ್ದಾಗ ತುಂಬತಕ್ಕ ಕರದ ರಕಮಿನ ಕೆಲ ಭಾಗವನ್ನು ತುಂಬಿದ ಪಕ್ಷದಲ್ಲಿ ಇಲ್ಲವೆ ಕರವನ್ನು ತುಂಬದೆ ಬಿಟ್ಟರೂ ಅಪೀಲನ್ನು ಸ್ವೀಕರಿಸಲು ನ್ಯಾಯಮಂಡಳಕ್ಕೆ ಅಧಿಕಾರವಿರುವದು.

ನ್ಯಾಯಮಂಡಳವು ಕೊಟ್ಟ ನಿರ್ಣಯದ ವಿರುದ್ಧ ಹೈಕೋರ್ಟಿಗೆ ಅಪೀಲು ಮಾಡಿಕೊಳ್ಳಲು ವ್ಯಾಪಾರಸ್ಥರಿಗೆ ಅಧಿಕಾರವಿರುವದು.

## ರಿವ್ಹಿಜನ್.

ಈ ಕಾಯ್ದೆಯನ್ವಯ ಮಾಡಿದ ಕರಾಕರಣೆಯ ಆಜ್ಞೆಯನ್ನುಳಿದು ಯಾವದೇ ಆಜ್ಞೆಯ ಹಾಗೂ ಕರಾಕರಣೆಯ ಆಜ್ಞೆಯ ವಿರುದ್ಧ ಅಪೀಲು ಮಾಡಿದಿದ್ದಪಕ್ಷ

ದಲ್ಲಿ ಆಜ್ಞೆಯು ವಿರುದ್ಧ ವ್ಯಾಪಾರಸ್ಥರು ಡೆಪ್ಯುಟಿ ಕಮಿಶನರರ ಕಡೆಗೆ ರಿವ್ಹಿಜನ್ನಿನ ಅರ್ಜಿಯನ್ನು ಮಾಡಿಕೊಳ್ಳಬಹುದು. ಇಂಥ ರಿವ್ಹಿಜನನ್ನು ಡೆಪ್ಯುಟಿ ಕಮಿಶನರರು ತಮ್ಮ ಸ್ವಂತ ಅಧಿಕಾರದಿಂದ ( Suo Motu ) ಸಹ ಮಾಡಬಹುದು. ಈ ರಿವ್ಹಿಜನ ಅರ್ಜಿಯನ್ನು ೧೬ ನೇ ನಂಬರಿನ ಫಾರ್ಮಿನಲ್ಲಿ ಮಾಡಿಕೊಳ್ಳಬೇಕು. ಯಾವ ಆಜ್ಞೆಯ ವಿರುದ್ಧ ರಿವ್ಹಿಜನ್ ಅರ್ಜಿಯನ್ನು ಮಾಡಿಕೊಳ್ಳುವದಿದೆಯೋ ಅಂಥ ಆಜ್ಞೆಯು ತಮಗೆ ಮುಟ್ಟಿದ ೬೦ ದಿವಸಗಳೊಳಗೆ ರಿವ್ಹಿಜನ್ ಅರ್ಜಿಯನ್ನು ಮಾಡಿಕೊಳ್ಳಬೇಕು. ರಿವ್ಹಿಜನ್ ಅರ್ಜಿಯೊಂದಿಗೆ ಮೂಲ ಆಜ್ಞೆಯ ಪ್ರತಿಯನ್ನೂ ಅದರ ಪ್ರಕಾರ ತುಂಬತಕ್ಕ ಕರದ ರಕಮನ್ನು ತುಂಬಿದಬಗ್ಗೆ ದಾಖಲೆಯನ್ನೂ ಲಗ್ತ ಇಡಬೇಕು. ವ್ಯಾಪಾರಸ್ಥರು ಮಾಡಿಕೊಂಡ ರಿವ್ಹಿಜನ ಅರ್ಜಿಯ ನಿರ್ಣಯದ ಮೇಲೆ ಯಾವದೇ ತರದ ಅಪೀಲು ಇಲ್ಲವೆ ರಿವ್ಹಿಜನ್ ಪುನಃ ಮಾಡಲು ಬರುವದಿಲ್ಲ. ಆದರೆ ಡೆಪ್ಯುಟಿ ಕಮಿಶನರರು ಸ್ವಂತ ಅಧಿಕಾರದಿಂದ ಮಾಡಿದ ರಿವ್ಹಿಜನ ನಿರ್ಣಯದ ವಿರುದ್ಧ ಕಮಿಶನರರ ಕಡೆಗೆ ಇಲ್ಲವೆ ನ್ಯಾಯಮಂಡಳದ ಕಡೆಗೆ ಅಪೀಲು ಮಾಡಿಕೊಳ್ಳಲು ಅವಕಾಶವಿರುವದು. ಇಂಥ ( ಡೆಪ್ಯುಟಿ ಕಮಿಶನರರ ) ನಿರ್ಣಯದ ವಿಷಯದಲ್ಲಿ ಮತ್ತು ಇತರ ಯಾವದೇ ಅಧಿಕಾರಿಗಳ ಆಜ್ಞೆಯನ್ನು ಸ್ವಂತ ಅಧಿಕಾರದಿಂದ ರಿವ್ಹಿಜನ ಮಾಡಲು ಕಮಿಶನರರಿಗೆ ಅಧಿಕಾರವಿರುವದು. ಪರಂತು ಹೀಗೆ ಕಮಿಶನರರು ಸ್ವಂತ ಅಧಿಕಾರದಿಂದ ರಿವ್ಹಿಜನ ಮಾಡುವ ಆಜ್ಞೆಗಳು, ಅಪೀಲು ಮಾಡಿಕೊಳ್ಳಲು ಬರುವಂತಹವಿದ್ದರೆ( ಅಪಿಲೇಬಲ್ ) ಅವು ವ್ಯಾಪಾರಸ್ಥರಿಗೆ ಮುಟ್ಟಿದ ೬೦ ದಿವಸಗಳ ಅವಧಿಯ ನಂತರವೇ ಕಮಿಶನರರು ಅವುಗಳ ರಿವ್ಹಿಜನ ನಿರ್ಣಯ ಮಾಡಬೇಕಾಗುವದು. ಕಮಿಶನರರಾಗಲಿ ಡೆಪ್ಯುಟಿ ಕಮಿಶನರ-ರಾಗಲಿ ಸ್ವಂತ ಅಧಿಕಾರದಿಂದ ಮಾಡುವ ರಿವ್ಹಿಜನ ಪ್ರಕರಣಗಳನ್ನು ಮೂಲ ಆಜ್ಞೆಗಳು ವ್ಯಾಪಾರಸ್ಥರಿಗೆ ತಲುಪಿದ ೪ ವರ್ಷಗಳೊಳಗಾಗಿ ಮಾಡಬೇಕಾಗುವದು.

ಕಮಿಶನರರು ಸ್ವಂತ ಅಧಿಕಾರದಿಂದ ಮಾಡಿದ ರಿವ್ಹಿಜನ ನಿರ್ಣಯದ ಮೇಲೆ ಹಾಯಕೋರ್ಟಿಗೆ ೬೦ ದಿವಸಗಳಲ್ಲಿ ಅಪೀಲು ಮಾಡಿಕೊಳ್ಳಲು ಬರುತ್ತದೆ.

ಅಪೆಲೇಟ ನ್ಯಾಯಮಂಡಳವು ಕೊಟ್ಟ ಅಪೀಲ ನಿರ್ಣಯದ ವಿರುದ್ಧ ಹಾಯಕೋರ್ಟಿಗೆ ಯಾವದೇ ಕಾಯ್ದೆಯ ಪ್ರಶ್ನೆ ಬಂದಾಗ ಮಾತ್ರ ವ್ಯಾಪಾರಸ್ಥರು ರಿವ್ಹಿಜನ ಅರ್ಜಿಯನ್ನು ಮಾಡಿಕೊಳ್ಳಲು ಬರುತ್ತದೆ. ಇಂಥ ರಿವ್ಹಿಜನ ಅರ್ಜಿಯನ್ನು ಡೆಪ್ಯುಟಿ ಕಮಿಶನರರೂ ( ತಮ್ಮ ವತಿಯಿಂದ ) ಹಾಯಕೋರ್ಟಿಗೆ ಮಾಡಿಕೊಳ್ಳಲು ಬರುತ್ತದೆ.

ಪ್ರಕರಣಗಳನ್ನು ನಿಕಾಲೆ ಮಾಡುವಾಗ ಯಾವದೇ ಮುದ್ದೆಯು ಅಪೆಲೇಟ ನ್ಯಾಯಮಂಡಳದ ಗಮನಕ್ಕೆ ಬಂದಿರದಿದ್ದರೆ ಹಾಗೂ ಅಂಥ ಮುದ್ದೆಯು ಮುಂದೆ ತಿಳಿದು ಬಂದಾಗ, ವ್ಯಾಪಾರಸ್ಥರು ಇಲ್ಲವೆ ಡೆಪ್ಯುಟಿ ಕಮಿಶನರರು ಅರ್ಜಿಯನ್ನು ಮಾಡಿಕೊಂಡ ಪಕ್ಷದಲ್ಲಿ, ಈ ವಿಷಯದಲ್ಲಿ ಮೊದಲು ಕೊಟ್ಟ ನಿರ್ಣಯದ

ಆಜ್ಞೆಯನ್ನು ಪುನಃ ಪರಿಶೀಲಿಸುವ ಅಧಿಕಾರವು ನ್ಯಾಯಮಂಡಳಕ್ಕೆ ಇರುವದು. ಇಂಥ ಅರ್ಜಿಯನ್ನು ಅಪೀಲ ನಿರ್ಣಯ ತಮಗೆ ತಲುಪಿದ ೬ ತಿಂಗಳಲ್ಲಿ ಮಾಡಿಕೊಳ್ಳಬಹುದು.

## ೧೪. ಈ ಕಾಯ್ದೆಯನ್ವಯ ಗುನ್ಹೆಗಳು ಹಾಗು ಶಿಕ್ಷೆಗಳು.

I (೧) ಈ ಕಾಯ್ದೆಯ ಪ್ರಕಾರ ಕರ ಕೊಡಲು ಪಾತ್ರನಿದ್ದು ಲೆಕ್ಕಪತ್ರಗಳನ್ನು ನಿರ್ದಿಷ್ಟ ವೇಳೆಯಲ್ಲಿ ಅಧಿಕಾರಿಗಳಿಗೆ ಸಲ್ಲಿಸದಿದ್ದರೆ;

(೨) ನೋಂದಣಿಗೆ ಅರ್ಹನಾಗಿದ್ದು ನಿರ್ದಿಷ್ಟ ಅವಧಿಯಲ್ಲಿ ನೋಂದಣಿ ಮಾಡಿಸಿಕೊಳ್ಳಲು ಅರ್ಜಿ ಮಾಡಲು ತಪ್ಪಿದಲ್ಲಿ;

(೩) ಕಲಮು ೧೮ (೧) ಅಥವಾ (೨) ಕ್ಕೆ ವಿರುದ್ಧವಾಗಿ ಹೆಚ್ಚು ಕರವನ್ನು ಇಲ್ಲವೆ ಕರ ವಸೂಲು ಮಾಡಬಾರದಂಥ ಪ್ರಸಂಗದಲ್ಲಿ ಕರವನ್ನು ವಸೂಲು ಮಾಡಿದರೆ;

(೪) ಕರಾಕರಣೆಯ ಆಜ್ಞೆಯ ಪ್ರಕಾರ ನಿರ್ದಿಷ್ಟ ಪಡಿಸಿದ ಅವಧಿಯಲ್ಲಿ ಕರವನ್ನಾಗಲಿ ದಂಡದ ಹಣವನ್ನಾಗಲಿ ತುಂಬಲು ತಪ್ಪಿದಲ್ಲಿ; ವ್ಯಾಪಾರಸ್ಥನು ೨೦೦ ರೂಪಾಯಿ ಜುಲ್ಮಾನೆಗೆ ಪಾತ್ರ ನಾಗಬಹುದು

II (೧) ಬುದ್ಧ್ಯಾಪೂರ್ವಕವಾಗಿ ಸುಳ್ಳು ಲೆಕ್ಕಪತ್ರಗಳನ್ನು ಸಲ್ಲಿಸಿದಾಗ ಅಥವಾ ಕರ ಕೊಡಲು ಪಾತ್ರನಿದ್ದು ಲೆಕ್ಕ ಪತ್ರಿಕೆಗಳನ್ನು ಸಲ್ಲಿಸಲು ತಪ್ಪಿದರೆ;

(೨) ಯಾವದೇ ವಾಣಿಜ್ಯ ಕರಗಳ ಅಧಿಕಾರಿಗೆ ೨೮ ನೇ ಕಲಮಿಗೆ ವಿರುದ್ಧವಾಗಿ ಅವನ ಕೆಲಸಗಳಲ್ಲಿ ವ್ಯತ್ಯಯವನ್ನು ಉಂಟು ಮಾಡಿದ ಪಕ್ಷದಲ್ಲಿ;

(೩) ಕೊಡಬೇಕಾದ ಕರವನ್ನು ಮೋಸದಿಂದ ತಪ್ಪಿಸಿದಲ್ಲಿ;

(೪) ಬುದ್ಧ್ಯಾಪೂರ್ವಕವಾಗಿ ಈ ಕಾಯ್ದೆಯ ಕಲಮು ಇಲ್ಲವೆ ಅಧಿನಿಯಮಗಳ ನಿಯಮಗಳನ್ನು ಉಲ್ಲಂಘಿಸಿದಾಗ;

ವ್ಯಾಪಾರಸ್ಥನು ತಾನು ಕೊಡಬೇಕಾದ ಕರವನ್ನು ತೆರುವದಲ್ಲದೆ ೨೦೦೦ ರೂಪಾಯಿ ದಂಡಕ್ಕೆ ಅಥವಾ ೬ ತಿಂಗಳುಗಳ ಸಾದಾ ಶಿಕ್ಷೆಗೆ ಇಲ್ಲವೆ ದಂಡ-ಶಿಕ್ಷೆಗಳೆರಡಕ್ಕೂ ಗುರಿಯಾಗುತ್ತಾನೆ. ಇಂಥ ಅಪರಾಧವು ನಿರಂತರವಾಗಿ ಘಟಿಸಿದಲ್ಲಿ ಆ ಅವಧಿಯಲ್ಲಿ ದಿನವೊಂದಕ್ಕೂ ೧೦೦ ರೂಪಾಯಿಗೆ ಮಿಕ್ಕದಷ್ಟು ದಂಡಕ್ಕೆ ಪಾತ್ರನಾಗುತ್ತಾನೆ.

## ೧೪. ಅಪರಾಧದ ಸಂಬಂಧದಲ್ಲಿ ರಾಜಿ.

ಈ ಕಾಯ್ದೆಯನ್ವಯ ಕೊಡಬೇಕಾದ ಕರವನ್ನು ಕೊಡಲು ತಪ್ಪಿದಾಗ ಅಥವಾ ಕರ ಕೊಡುವದನ್ನು ಬುದ್ಧಿಪೂರ್ವಕವಾಗಿ ತಪ್ಪಿಸಿದಲ್ಲಿ, ಅಂಥ ಕರದ ಹಣವನ್ನಲ್ಲದೆ ೧೦೦೦ರೂ.ಗೆ ಮಿಕ್ಕದಷ್ಟು ಅಥವಾ ಕೊಡಬೇಕಾಗಿದ್ದ ಕರದ ರಕಮಿನ ಎರಡರಷ್ಟು-ಇವುಗಳಲ್ಲಿ ಯಾವದು ಹೆಚ್ಚೋ ಆ ರಕಮಿನಷ್ಟು, ಹಾಗೂ ೪೫ ನೇ ಕಲಮಿನನ್ವಯ ಮೇಲ್ಕಾಣಿಸಿದ ಅಪರಾಧಗಳನ್ನು ಬಿಟ್ಟು ಉಳಿದ ಯಾವದೇ ಅಪರಾಧಕ್ಕಾಗಿ ೧೦೦೦ ರೂ. ಗೆ ಮಿಕ್ಕದಷ್ಟುಹಣವನ್ನು ಶಿಕ್ಷೆಗೆ ಪಾತ್ರನಾದ ವ್ಯಾಪಾರಸ್ಥನಿಂದ ಆದ ಅಪರಾಧಗಳ ಬಗ್ಗೆ ನಿರ್ದಿಷ್ಟ ಪಡಿಸಿದ ಅಧಿಕಾರಿಯು ರಾಜಿಯ ಹಣದ ರೂಪದಲ್ಲಿ ಸ್ವೀಕರಿಸಲು ಅವಕಾಶವಿದೆ.

## ೧೫. ವ್ಯಾಪಾರಸ್ಥರು ಇಡಬೇಕಾದ ಲೆಕ್ಕಪತ್ರಗಳು.

ಪ್ರತಿಯೊಬ್ಬ ನೋಂದಾಯಿಸಲ್ಪಟ್ಟ ಇಲ್ಲವೆ ಲಾಯಸನ್ಸ ಪಡೆದ ವ್ಯಾಪಾ-ರಸ್ಥನು ತನ್ನ ಖರೀದಿ-ವಿಕ್ರಿಯ ವ್ಯವಹಾರದ ಸರಿಯಾದ ಲೆಕ್ಕವನ್ನು ಕನ್ನಡ, ಇಂಗ್ಲಿಷ, ಹಿಂದಿ, ಮರಾಠಿ ಅಥವಾ ಸರಕಾರದವರು ಗೊತ್ತುಪಡಿಸುವ ಬೇರೆ ಯಾವದೇ ಭಾಷೆಯಲ್ಲಿ ಇಡತಕ್ಕದ್ದು. ಈ ಲೆಕ್ಕಪತ್ರಗಳನ್ನು ಇಡುವಾಗ ಕಲಮು ೫ ಮತ್ತು ೬ ರಲ್ಲಿ ಸಮಾವೇಶವಾಗುವ ಸರಕುಗಳ ಖರೀದಿ-ವಿಕ್ರಿ ವ್ಯವಹಾರವನ್ನು ಪ್ರತ್ಯೇಕವಾಗಿ ತೋರಿಸತಕ್ಕದ್ದು. ವ್ಯಾಪಾರಸ್ಥರು ತಮ್ಮ ವ್ಯವಹಾರದ ರೂಢಿಯಂತೆ ಇಟ್ಟ ಲೆಕ್ಕದ ಪುಸ್ತಕಗಳಲ್ಲಿ ಮೇಲೆ ಹೇಳಿದ ವಿವರಗಳು ಸ್ಪಷ್ಟವಾಗಿ ಲಭ್ಯವಿಲ್ಲದಿದ್ದರೆ ಈ ಕಾಯ್ದೆಯನ್ವಯ ರಚಿಸಲ್ಪಟ್ಟ ಅಧಿನಿಯಮಗಳ ಪ್ರಕಾರ ವಿವರವಾದ ಲೆಕ್ಕವನ್ನು ಆಯಾ ನಮೂನೆಯಲ್ಲಿ ಇಡತಕ್ಕದ್ದು. ಅಂಥ ವಿವರಗಳನ್ನು ಕೆಳಗೆ ಕೊಟ್ಟಿರುತ್ತದೆ.

೧೬ ನೇ ಕಲಮಿನನ್ವಯ ರಾಜಿಯ ಹಣವನ್ನು ತುಂಬಲು ಅಧಿಕೃತನಾದ ವ್ಯಾಪಾರಸ್ಥನು ವಿಕ್ರಿಯ ವ್ಯವಹಾರದ ಬಗ್ಗೆ ವಿವರಗಳನ್ನು ಇಡುವ ಆವಶ್ಯಕತೆಯಿಲ್ಲ. ಆದರೆ ಖರೀದಿಯ ವಿವರಗಳನ್ನು ಮಾತ್ರ ಇಡತಕ್ಕದ್ದು.

ವಾಣಿಜ್ಯಕರಗಳ ಕಮಿಶನರರು ಯಾವದೇ ವ್ಯಾಪಾರಸ್ಥನಿಗೆ ಇಲ್ಲವೆ ವ್ಯಾಪಾರೀ ವರ್ಗಕ್ಕೆ ಇಂಥದೇ ರೀತಿಯಲ್ಲಿ ಲೆಕ್ಕಪತ್ರಗಳನ್ನಿಡಬೇಕೆಂದು ಲೇಖಿಯ ಮೂಲಕ ನಿರ್ದೇಶಿಸಬಹುದು.

ಮೇಲೆ ಹೇಳಿದಂತೆ ಇಡಬೇಕಾದ ಲೆಕ್ಕಪತ್ರಗಳನ್ನು ಈ ಕೆಳಗೆ ವಿವರಿಸಿದಂತೆ ಇಡಲು ಎಲ್ಲ ವ್ಯಾಪಾರಸ್ಥರೂ ಪ್ರಯತ್ನಿಸಬೇಕು.

(೧) ೭,೫೦೦ ರೂ. ದಿಂದ ೨೦,೦೦೦ ರೂ. ಗೆ ಮಿಕ್ಕದ ವ್ಯವಹಾರವುಳ್ಳ ವ್ಯಾಪಾರಸ್ಥರು ರಾಜಿಯ ಹಣವನ್ನು ಕೊಡಲು ಅಧಿಕೃತರಾಗಿದ್ದರೆ, ಅವರು ತಮ್ಮ ಪ್ರತಿಯೊಂದು ಸರಕುಗಳ ಖರೀದಿಯ ವ್ಯವಹಾರವನ್ನು ಈ ಪುಸ್ತಕದ ಕೊನೆಯಲ್ಲಿ ಕಾಣಿಸಿದ ನಮೂನೆ (I) ರಲ್ಲಿ ಇಡಬೇಕು. ಇದರ ಹೊರತಾಗಿ ವ್ಯವಹಾರದ ರೂಢಿಯಂತೆ ಇಡಬೇಕಾದ ಖಾತೆ-ಕೀರ್ದಿಗಳನ್ನೂ ಇಡಬೇಕಾಗುವದು. ಕೊನೆಯಲ್ಲಿ ತೋರಿಸಿದ ನಮೂನೆ (I) ರಲ್ಲಿ ಇಡಬೇಕಾದ ಲೆಕ್ಕವು ಕರಾಕರಣೆಯು ಸುಲಭವಾಗುವ ದೃಷ್ಟಿಯಿಂದ ಸೂಚಿಸಲ್ಪಟ್ಟಿರುತ್ತದೆ.

(೨) ರೂ. ೨೦,೦೦೦ ಕ್ಕೆ ಮೇಲ್ಪಟ್ಟ ರೂ. ೪೦,೦೦೦ ಕ್ಕೆ ಮಿಕ್ಕದ ವ್ಯವಹಾರವುಳ್ಳವರು ತಮ್ಮ ವ್ಯವಹಾರದ ವಾಡಿಕೆಯಂತೆ ಇಡಬೇಕಾದ ಖಾತೆ-ಕೀರ್ದಿಗಳನ್ನು ಇಡಬೇಕು. ಇಂಥ ಖಾತೆ-ಕೀರ್ದಿಗಳು ಅವರು ವ್ಯವಹಾರ ಮಾಡುವ ಪ್ರತಿಯೊಂದು ಸರಕುಗಳ ಖರೀದಿ-ವಿಕ್ರಿಗಳ ಖಾತೆಗಳ ವಿವರಗಳನ್ನು ತೋರಿಸುವಂತಿರದ ಪಕ್ಷದಲ್ಲಿ ಕೊನೆಯಲ್ಲಿ ಕಾಣಿಸಿದ ನಮೂನೆ I ಮತ್ತು II ರಲ್ಲಿ ರಜಿಸ್ಟರನ್ನು ಇಡಬೇಕು.

(೩) ೪೦,೦೦೦ ರೂ. ಗೆ ಮೇಲ್ಪಟ್ಟ ವ್ಯವಹಾರವುಳ್ಳ ವ್ಯಾಪಾರಸ್ಥರು ಖಾತೆ-ಕೀರ್ದಿಗಳನ್ನಷ್ಟೇ ಅಲ್ಲದೆ ತಮ್ಮ ಖರೀದಿ ಹಾಗೂ ವಿಕ್ರಿಯ ವ್ಯವಹಾರದ ಸಂಬಂಧದ ಸರಕುವಾರ ಖಾತೆಗಳನ್ನು ಇಡಲೇಬೇಕು. ಹೀಗೆ ಇಡಲು ಸಾಧ್ಯವಿಲ್ಲದ ಪ್ರಸಂಗದಲ್ಲಿ ಮೇಲೆ ಹೇಳಿದ ನಮೂನೆ (I) ಹಾಗೂ (II) ರಂತೆ ರಜಿಸ್ಟರಿನಲ್ಲಿ ಲೆಕ್ಕವನ್ನಿಡಬೇಕು

(೪) ಕಮಿಶನ ಏಜಂಟ ಅಥವಾ ದಲಾಲಿ ವ್ಯಾಪಾರಸ್ಥರು ತಮ್ಮ ಸ್ವಂತ ವ್ಯವಹಾರದ ಲೆಕ್ಕವನ್ನಿಡುವದಲ್ಲದೆ, ದಲಾಲಿ ವ್ಯವಹಾರದ ಬಗ್ಗೆ ತಮ್ಮಲ್ಲಿ ಬಂದ ಸರಕುಗಳ ಲೆಕ್ಕಪತ್ರಗಳನ್ನು ವಿವರ ಸಹಿತವಾಗಿ ಪ್ರತ್ಯೇಕವಾದ ರಜಿಸ್ಟರಿನಲ್ಲಿ ನಮೂನೆ (III) ರಂತೆ ಇಡತಕ್ಕದ್ದು.

ವ್ಯಾಪಾರಸ್ಥರು ಇಡತಕ್ಕ ಮೇಲ್ಕಾಣಿಸಿದ ಎಲ್ಲ ಲೆಕ್ಕಪತ್ರಗಳ ಪುಸ್ತಕಗಳನ್ನು ನೋಂದಣಿ ದಾಖಲೆಯಲ್ಲಿ ಕಾಣಿಸಿದ ತಮ್ಮ ವ್ಯವಹಾರದ ಸ್ಥಳಗಳಲ್ಲಿ ಇಡತಕ್ಕದ್ದು. ವ್ಯವಹಾರಕ್ಕೆ ಸಂಬಂಧಿಸಿದ ಎಲ್ಲ ಲೆಕ್ಕದ ಪುಸ್ತಕಗಳನ್ನೂ, ಕಾಗದಪತ್ರಗಳನ್ನೂ ಆಯಾ ವರ್ಷಾವಧಿ ಮುಗಿದ ೫ ವರ್ಷಗಳ ವರೆಗೆ ಕಾಯ್ದಿಡತಕ್ಕದ್ದು.

ಈ ರಾಜ್ಯದಲ್ಲಿ ಪರಿಶಿಷ್ಟ ೧, ೨, ೩ ಅಥವಾ ೪ ರಲ್ಲಿ ನಮೂದಿಸಿದ ಸರಕುಗಳ ವ್ಯವಹಾರ ಮಾಡುವ ವ್ಯಾಪಾರಸ್ಥರು ಆ ಸರಕುಗಳ ಮೇಲೆ ಒಮ್ಮೆ ಕರ ಕೊಟ್ಟಿದ್ದರೆ ಅವುಗಳ ಮೇಲೆ ಪುನಃ ಕರ ಬೀಳುವದಿಲ್ಲ. ಅದರಿಂದ ಆ ಸರಕುಗಳ ಮೇಲೆ ತಾವು ಕರ ಕೊಟ್ಟಿರುತ್ತೇವೆಂಬುದರ ಪುರಾವೆಗಾಗಿ ವಿಕ್ರಿ ಮಾಡಿದ ವ್ಯಾಪಾರಸ್ಥನಿಂದ ನಮೂನೆ ೩೨ ರಲ್ಲಿ ದಾಖಲೆಯನ್ನು ಪಡೆದುಕೊಂಡು ಅವುಗಳನ್ನು ಕರಾಕರಣೆ ಆಗುವತನಕ ಕಾದಿಡಬೇಕು.

ಪ್ರತಿಯೊಬ್ಬ ಠೋಕ ವ್ಯಾಪಾರಸ್ಥನು ಕಿರುಕೋಳ ವ್ಯಾಪಾರಸ್ಥನಿಗೆ ತಾನು ಮಾರಾಟಮಾಡಿದ ಸರಕುಗಳನ್ನು ಮುಟ್ಟಿಸುವಾಗ ಮತ್ತು ಇಂಥ ವಿಕ್ರಿಯ ಮೊತ್ತವು ೫೦೦ ರೂ. ಗಿಂತ ಮಿಕ್ಕಿದ್ದರೆ ೧೪ ನೇ ನಂಬರ ಫಾರ್ಮಿನಲ್ಲಿ 'ಬಿಲ್ ಆಫ್ ಲೇಡಿಂಗ'ದ ಮೂರು ಪ್ರತಿಗಳನ್ನು ತಯಾರಿಸಿ. ಆ ಸರಕಿನ ಮಾಲಕ ಅಥವಾ ಮ್ಯಾನೇಜರನು ಸಹಿ ಮಾಡಬೇಕು. ಇದರ ಒಂದು ಪ್ರತಿಯನ್ನು ಸರಕುಗಳನ್ನು ಕೊಳ್ಳುವವನು ಅಥವಾ ಅವನ ಏಜಂಟನು ಸ್ವತಃ ಸಾಗಾಟ ಮಾಡುತ್ತಿದ್ದರೆ ಅವನಿಗೆ. ಹಾಗಿಲ್ಲದಲ್ಲಿ ಆ ಸರಕುಗಳ ಸಾಗಾಟಗಾರನಿಗೆ ಕೊಡಬೇಕು. ಎರಡನೇ ಪ್ರತಿಯನ್ನು ಮಾರಾಟಗಾರನು ತನ್ನ ಡಿವ್ಹಿಜನ್ನಿನ ಇನಸ್ಪೆಕ್ಟಿಂಗ ಆಫೀಸರರಿಗೆ ಕಳಿಸಬೇಕು. ಹಾಗೂ ಮೂರನೆಯ ಪ್ರತಿಯನ್ನು ಮಾರಾಟಗಾರನು ತನ್ನ ಹತ್ತಿರ ಇಟ್ಟುಕೊಳ್ಳತಕ್ಕದ್ದು.

## ೧೬. ಮೈಸೂರು ಸರಕಾರದ ಮಾರಾಟ ಕರ ಕಾಯ್ದೆಯ ಸುಗ್ರೀವಾಜ್ಞೆ, ೧೯೫೭.

ಇಂಡಿಯನ್ ನ್ಯಾಶನಲ್ ಡೆವ್ಹಲಪ್‌ಮೆಂಟ ಕೌನ್ಸಿಲ್ ಸಂಸ್ಥೆಯ ನಿರ್ಣಯದ ಪ್ರಕಾರ ಕೇಂದ್ರ ಮತ್ತು ರಾಜ್ಯ ಸರಕಾರಗಳು ಕೆಲವೊಂದು ಸರಕುಗಳ ಮೇಲಿನ ಮಾರಾಟ ಕರವನ್ನು ರದ್ದು ಪಡಿಸಿ, ಅದರ ಬದಲು ಹೆಚ್ಚಿನ ಎಕ್ಸಾಯಿಜ ಸುಂಕವನ್ನು ಹೇರುವ ನಿರ್ಣಯಕ್ಕೆ ಬಂದಿದ್ದರಿಂದ ಕೇಂದ್ರ ಸರಕಾರವು ತಾ. ೧೪-೧೨-೧೯೫೭ ರಂದು ಕೆಲವು ಸರಕುಗಳ ಮೇಲೆ ಹೆಚ್ಚಿನ ಎಕ್ಸಾಯಿಜ ಸುಂಕವನ್ನು ಹೇರುವ ವಿಧೇಯಕವೊಂದನ್ನು ಲೋಕಸಭೆಯಲ್ಲಿ ಮಂಡಿಸಿ ಪಾಸು ಮಾಡಿಕೊಂಡಿತು. ಈ ನಿರ್ಣಯಕ್ಕೆ ಬರುವ ಮೊದಲು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಈ ಕರವನ್ನು ರಾಜ್ಯ ಸರಕಾರಗಳಲ್ಲಿ ಹಂಚಬೇಕೆಂಬ ಕೇಂದ್ರ ಸರಕಾರದ ಫಿನಾನ್ಸ ಕಮಿಶನ್ನಿನ ಶಿಫಾರಸುಗಳನ್ನು ಅಂಗೀಕರಿಸಿದ್ದಾರೆ.

ಈ ಹೆಚ್ಚಿನ ಎಕ್ಸಾಯಿಜ ಸುಂಕಕ್ಕೆ ಪಾತ್ರವಾದ ಸರಕುಗಳು ಯಾವವೆಂದರೆ:—(೧) (ಪಾವರಲೂಮನ್ನೊಳಗೊಂಡು) ಗಿರಣಿಯಲ್ಲಿ ತಯಾರಿಸಲ್ಪಟ್ಟ ಎಲ್ಲ ತರದ ಬಟ್ಟೆಗಳು, (೨) ಕಲ್ಲುಸಕ್ಕರೆ ಸಹಿತ ಎಲ್ಲ ತರದ ಸಕ್ಕರೆಗಳು, (೩) ತಂಬಾಕು ಮತ್ತು ಅದರಿಂದ ತಯಾರಾದ ವಸ್ತುಗಳು.

ಕೇಂದ್ರ ಸರಕಾರದ ಈ ವಿಧೇಯಕವನ್ನು ಜಾರಿಯಲ್ಲಿ ತರಲು ಎಲ್ಲ ರಾಜ್ಯ ಸರಕಾರಗಳು ಅದಕ್ಕನುಕೂಲವಾಗುವಂತೆ ತಮ್ಮ ರಾಜ್ಯಗಳಲ್ಲಿದ್ದ ಮಾರಾಟ ಕರ ಕಾಯ್ದೆಗಳಲ್ಲಿ ತಿದ್ದುಪಡಿ ಮಾಡುವದು ಅವಶ್ಯಕವಾಯಿತು. ಮೈಸೂರು ವಿಧಾನ ಮಂಡಳಗಳು ಈ ಸಮಯದಲ್ಲಿ ಕೂಡಿರಲಿಲ್ಲದ ಮೂಲಕ ಮೈಸೂರು

ರಾಜ್ಯಪಾಲರು ಈ ತಿದ್ದುಪಡಿಯನ್ನು ಸುಗ್ರೀವಾಜ್ಞೆಯ ಮುಖಾಂತರವಾಗಿ ಹೊರಡಿಸಿದರು. ಈ ಸುಗ್ರೀವಾಜ್ಞೆಯು ತಾ. ೧೪-೧೨-೧೯೫೭ ರಿಂದ ಜಾರಿಯಲ್ಲಿ ಬಂದಿರುವದು. ಇದರ ಮುಖ್ಯಾಂಶಗಳನ್ನು ಇಲ್ಲಿ ಸ್ವಲ್ಪದರಲ್ಲಿ ವಿವರಿಸಲಾಗಿದೆ.

ಈ ಸುಗ್ರೀವಾಜ್ಞೆಯನ್ವಯ ( ಮೈಸೂರು ಮಾರಾಟ ಕರ ಕಾಯ್ದೆಯ ) ಪರಿಶಿಷ್ಟ ೨ ರಲ್ಲಿ ಕಾಣಿಸಿದ ೧, ೨, ೩, ೪, ೫, ೬, ೭, ೨೭, ೨೮, ೨೯, ೩೦, ೩೧, ೩೨, ೩೪ ಮತ್ತು ೪೨ ಈ ಸರಕುಗಳ ಮತ್ತು ೩ ನೇ ಪರಿಶಿಷ್ಟದಲ್ಲಿ ಕಾಣಿಸಿದ ೩ ನೇ ನಂಬರದ ಸರಕುಗಳ ಮೇಲೆ ತಾ. ೧೪-೧೨ ೧೯೫೭ ರಿಂದ ಹೆಚ್ಚಿನ ಎಕ್ಸಾಯಿಜ ಸುಂಕ ಹೇರಿದ್ದಾರೆ. ಇವುಗಳ ಮಾರಾಟದ ಮೇಲೆ ಈ ಕಾಯ್ದೆಯನ್ವಯ ಕರ ಬೀಳುವದಿಲ್ಲ. ಆದರೆ ಇಂಥ ವಸ್ತುಗಳು ತಾ. ೧೪-೧೨-೧೯೫೭ ರಂದು ಯಾವದೇ ವ್ಯಾಪಾರಸ್ಥನ ಬಳಿಯಲ್ಲಿ ಹೆಚ್ಚಿನ ಎಕ್ಸಾಯಿಜ ಸುಂಕ ವಿಲ್ಲದೆ ಶಿಲುಕಿನಲ್ಲಿದ್ದಾಗ ಅಥವಾ ೧೪-೧೨-೧೯೫೭ ರ ನಂತರ ಅಂಥ ಸುಂಕಕ್ಕೆ ಒಳಪಡದೆ ಖರೀದಿ ಮಾಡಿದ ಸರಕುಗಳಿದ್ದರೆ ಅವುಗಳ ಖರೀದಿ ಅಥವಾ ವಿಕ್ರಿಯ ಮೇಲೆ ಪರಿಶಿಷ್ಟ ೨ ಅಥವಾ ೩ ರಲ್ಲಿ ನಮೂದಿಸಿದ ಪ್ರಕಾರ ಆಯಾ ವಸ್ತುಗಳ ಮುಂದೆ ತೋರಿಸಿದಂತೆ ಆಯಾ ಹಂತದಲ್ಲಿ ಹಾಗೂ ಆಯಾ ದರಗಳಂತೆ ಕರ ಕೊಡಬೇಕಾಗುತ್ತದೆ.

೧೮ ನೇ ಕಲಮಿನನ್ವಯ ತಿದ್ದುಪಡಿಯ ಸುಗ್ರೀವಾಜ್ಞೆಯ ಪ್ರಕಾರ ಈ ಹೆಚ್ಚಿನ ಸುಂಕ ಹೇರಿದ ಸರಕುಗಳನ್ನು ಮಾರಾಟ ಮಾಡುವಾಗ ಯಾವ ವ್ಯಾಪಾರಸ್ಥನೂ ಅಂಥ ವಿಕ್ರಿಯ ಮೇಲೆ ಕರ ವಸೂಲು ಮಾಡತಕ್ಕದ್ದಲ್ಲ.

೧೭ ನೇ ಕಲಮಿನನ್ವಯ ಇಂಥ ಹೆಚ್ಚಿನ ಎಕ್ಸಾಯಿಜ ಸುಂಕವನ್ನು ಕೊಟ್ಟಿರದ ವಸ್ತುಗಳ ಮಾರಾಟದ ಮೇಲೆ ಕರವನ್ನು ಕೊಡುವದಕ್ಕಾಗಿ ರಾಜಿಯ ಹಣದ ವ್ಯವಸ್ಥೆಯನ್ನೂ ಮಾಡಿರುತ್ತದೆ. ಇದರ ಪ್ರಕಾರ ಯಾವದೇ ವ್ಯಾಪಾರಸ್ಥನಿಂದ ಕರಾಕರಣೆಯ ಅಧಿಕಾರಿಯು ಕರಕ್ಕೆ ಪಾತ್ರವಿದ್ದ ಆ ಸರಕುಗಳ ೧೯೫೬-೫೭ ನೇ ಸಾಲಿನ ಅವನ ಒಟ್ಟು ವ್ಯವಹಾರದ ಮೊತ್ತದ ೧/೪ ದಷ್ಟು ಮೊತ್ತದ ಮೇಲೆ ಅವುಗಳ ಮೇಲೆ ತೆರಬೇಕಾದ ಕರದ ರಕಮಿನಷ್ಟು ಹಣವನ್ನು ರಾಜಿಯ ಹಣದ ರೂಪದಿಂದ ಸ್ವೀಕರಿಸಬಹುದು.

ಎಲ್ಲ ನೋಂದಾಯಿಸಲ್ಪಟ್ಟ ವ್ಯಾಪಾರಸ್ಥರೂ ತಾ. ೧೪-೧೨-೧೯೫೭ ರಂದು ತಮ್ಮ ಬಳಿಯಲ್ಲಿದ್ದ ಎಲ್ಲ ಸರಕುಗಳ ಪ್ರಾರಂಭದ ಶಿಲಕನ್ನು ತಮ್ಮ ಹದ್ದಿನಲ್ಲಿಯ ಕರ ಕರಣೆಯ ಅಧಿಕಾರಿಗಳಿಗೆ ತಿಳಿಸತಕ್ಕದ್ದು. ಇದಕ್ಕಾಗಿ ಎಲ್ಲ ವ್ಯಾಪಾರಸ್ಥರು ತಮ್ಮ ಲೆಕ್ಕದ ಪುಸ್ತಕಗಳಲ್ಲಿ ಆ ದಿವಸದ ಆರಂಭದ ಶಿಲಕನ್ನು ಬೇರೆ ತೋರಿಸಿಡಬೇಕು. ಅಂದರೆ ಕರಾಕರಣೆಗೆ ಸುಲಭವಾಗುವದು.

# ಖರೀದಿ ರಜಿಸ್ಟರ ನಮೂನೆ. I

| ತಾರೀಖು | ಮಾರಾಟ ಮಾಡುವ ವ್ಯಾಪಾರಸ್ಥರ ಹೆಸರು | ಬಿಲ್ ನಂ. | ನೋಂದಣಿ ನಂ. | ಮಾಲಿನ ವರ್ಣನೆ | ಬಿಲ್ಲಿನ ರಕಮು | ಕರಮುಕ್ತ ಸರಕು | ಕಲಮು ೬ ರಲ್ಲಿ ಸಮಾವೇಶವಾದ ಸರಕು |
|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ |

| ಕಲಮು ೫ ರಲ್ಲಿ ಸಮಾವೇಶವಾದ ಸರಕುಗಳ ಮೇಲೆ ಮೊದಲನೇ ಸಾರೆ ಕರ ಕೊಟ್ಟಲ್ಲಿ | ಕಲಮು ೫ ರಲ್ಲಿ ಸಮಾವೇಶವಾದ ಸರಕುಗಳ ಮೇಲೆ ಮೊದಲನೇ ಸಾರೆ ಕರ ಬೀಳದಿದ್ದಲ್ಲಿ. | | | | ಬಹು ಮುಖಿ ಕರಕ್ಕೆ ಪಾತ್ರವಿದ್ದ ಸರಕುಗಳು. | |
|---|---|---|---|---|---|---|
| | ಪರಿಶಿಷ್ಟ ೧ | ಪರಿಶಿಷ್ಟ ೨ | ಪರಿಶಿಷ್ಟ ೩ | ಪರಿಶಿಷ್ಟ ೪ | | |
| ೯ | ೯ ಅ | ೯ ಬ | ೯ ಕ | ೯ ಡ | ನೂರಕ್ಕೆ ೧. | ನೂರಕ್ಕೆ ೨ |

# ವಿಕ್ರಿ ರಜಿಸ್ಟರ II

| ತಾರೀಖು | ಬಿಲ್ ನಂ. | [illegible] | [illegible] | [illegible] | ಲಾಯಸೆನ್ಸಿಗೆ ಒಳಪಟ್ಟ ಸರಕುಗಳು. | | ಪರಿಶಿಷ್ಟ ೨,೩,೪ ಇವುಗಳಲ್ಲಿ ಸಮಾವೇಶವಾದ ಸರಕುಗಳ, ಕರಕ್ಕೆ ಪಾತ್ರವಿಲ್ಲದ ವಿಕ್ರಿ. | ಬಹುಮುಖಿ ಕರಕ್ಕೆ ಪಾತ್ರವಿದ್ದ ವಿಕ್ರಿ | | ಶೆರಾ |
|---|---|---|---|---|---|---|---|---|---|---|
| | | | | | ಕಮಿಶನ್ | ಲಾಯಸೆನ್ಸ ಫೀ | | ೧ % | ೨ % | |
| ೧ | ೨ | ೩ | ೪ | ೫ | ೬ | | ೭ | ೮ | | ೯ |

| ಪರಿಶಿಷ್ಟ ೧ ರಲ್ಲಿ ನಮೂದಿಸಿದ ಸರಕುಗಳ, ಮೊದಲನೇ ಹಂತದಲ್ಲಿ ಕರಕ್ಕೆ ಪಾತ್ರವಿದ್ದ ವಿಕ್ರಿ ರಕಮು | ಪ. ೨ ರಲ್ಲಿ ನಮೂದಿಸಿದ ಸರಕುಗಳ ಮೊದಲನೇ ಹಂತದಲ್ಲಿ ಕರಕ್ಕೆ ಪಾತ್ರವಿದ್ದ ವಿಕ್ರಿ ರಕಮು | ಪ. ೩ ರಲ್ಲಿ ನಮೂದಿಸಿದ ಸರಕುಗಳ ಮೇಲೆ ಖರೀದಿಯ ಕರಕ್ಕೆ ಪಾತ್ರವಿದ್ದ ಖರೀದಿ. | ಪ. ೪ ರಲ್ಲಿ ನಮೂದಿಸಿದ ಸರಕುಗಳ ಮೇಲೆ ಕೊನೆಯ ಹಂತದಲ್ಲಿ ಖರೀದಿ ಕರಕ್ಕೆ ಪಾತ್ರವಿದ್ದ ಖರೀದಿ | |
|---|---|---|---|---|
| ೧೦ | ೧೧ | ೧೨ | ೧೩ | |

# ಕಮಿಶನ್ ಏಜೆಂಟರು ಇಡಬೇಕಾದ ಖರೀದಿ ಅಥವಾ ವಿಕ್ರಿ ರಜಿಸ್ಟರ ನಮೂನೆ ನಂ. III.

| ತಾರೀಖು. | ಬಿಲ್ ನಂ. | ಮಾಲಿನ ವರ್ಣನೆ ವ ಪರಿಮಾಣ. | ಯಾರ ಸಲುವಾಗಿ ವಿಕ್ರಿ ಮಾಡಿತು ಅಥವಾ ಯಾರಿಂದ ಖರೀದಿ ಮಾಡಿತು ಅಂಥ ಮಾಲಕನ ಹೆಸರು. | ಯಾರಿಗೆ ವಿಕ್ರಿ ಮಾಡಿತು ಅಥವಾ ಯಾರ ಸಲುವಾಗಿ ಖರೀದಿ ಮಾಡಿತು ಅಂಥ ಮಾಲಕನ ಹೆಸರು. | ಕಮಿಶನ್. | ಕರಕ್ಕೆ ಪಾತ್ರ ವಿಲ್ಲದ ವಿಕ್ರಿ ಅಥವಾ ಖರೀದಿ. |
|---|---|---|---|---|---|---|
| ೧ | ೨ | ೩ | ೪ | ೫ | ೬ | ೭ |

| ಕರಕ್ಕೆ ಪಾತ್ರ ವಿದ್ದ ವಿಕ್ರಿ ಅಥವಾ ಖರೀದಿ. | ಲಾಯಸೆನ್ಸ ಫೀಗೆ ಒಳಪಟ್ಟ ವಿಕ್ರಿ. | ಕಲಮು ೫ ರ ಪ್ರಕಾರ ಕರಕ್ಕೆ ಪಾತ್ರ ವಿದ್ದ ವಿಕ್ರಿ ಅಥವಾ ಖರೀದಿ | | | | ಬಹುಮುಖಿ ಕರಕ್ಕೆ ಪಾತ್ರ ವಿದ್ದ ವಿಕ್ರಿ | |
|---|---|---|---|---|---|---|---|
| | | ಪ. ೧. | ಪ. ೨. | ಪ. ೩. | ಪ. ೪. | ನೂ. ಕ್ಕೆ ೧% | ನೂ. ಕ್ಕೆ ೨% |
| ೮ | ೯ | ೧೦ | | | | ೧೧ | |

# ೧೭ ಕಿರಾಣಿ ವ್ಯಾಪಾರಕ್ಕರಿಗೆ ಸಂಬಂಧಪಟ್ಟಿದ್ದು.

## ಕರಮುಕ್ತ ಸರಕುಗಳು.

I ಕೆಳಗೆ ಕಾಣಿಸಿದ ಸರಕುಗಳು ಸಂಪೂರ್ಣವಾಗಿ ಕರಮುಕ್ತ ವಿರುತ್ತವೆ.

(೧) ಉಪ್ಪು. (೨) ಪಾಟಿ. ಪಾಟಿಪೆನ್ಸಿಲ. (೩) ಕುಂಕುಮ.

II ಕೆಳಗೆ ಕಾಣಿಸಿದ ಸರಕುಗಳ ಮೇಲೆ ತಾರೀಖು ೧-೧೦-೧೯೫೭ ರಿಂದ ೧೩-೧೨-೫೭ ರ ವರೆಗೆ ಮೊದಲನೇ ಹಂತದಲ್ಲಿ ಮಾರಾಟ ಕರ ಕೊಟ್ಟಿದ್ದರೆ ಅಥವಾ ೧೪-೧೨-೫೭ ರ ನಂತರ ಹೆಚ್ಚಿನ ಎಕ್ಸಾಯಿಜ ಡ್ಯೂಟಿಯನ್ನು ಕೊಟ್ಟಿದ್ದರೆ ಅವು ಕರಮುಕ್ತ ವಾಗುತ್ತವೆ.

(೧) ಸಕ್ಕರೆ, ಕಲ್ಲು ಸಕ್ಕರೆ, ಲಿಸಾ ಸಕ್ಕರೆ ಇನ್ನುಳಿದ ಎಲ್ಲ ಸಕ್ಕರೆಗಳು.
(೨) ಬೀಡಿ, ಸಿಗರೇಟು, ತಂಬಾಕು.

III ಕೆಳಗೆ ಕಾಣಿಸಿದ ಸರಕುಗಳ ಮೇಲೆ ಮೊದಲನೇ ಹಂತದಲ್ಲಿ ಕರವನ್ನು ಕೊಟ್ಟಿದ್ದರೆ ಅವು ಕರಮುಕ್ತ ವಾಗುತ್ತವೆ.

(೧) ಕಡ್ಡಿ ಪೆಟ್ಟಿಗೆ. (೨) ವನಸ್ಪತಿ (ಡಾಲ್ಡಾ ಇತ್ಯಾದಿ) (೩) ಸೀಮೆ ಎಣ್ಣೆ (ರಾಕೇಲ). (೪) ನಸ್ಯ, ತಿನ್ನುವ ತಂಬಾಕು. (೫) ಕಾಫೀ ಬೀಜ. (೬) ಚಹಾ (೭) ಹತ್ತೀಕಾಳು (೮) ಶೇಂಗಾ ಎಣ್ಣೆ (೯) ಬಾರದಾನ. (೧೦) ಟೆಂಗಿನಕಾಯಿ. (೧೧) ಶೀಗೆಕಾಯಿ. (೧೨) ಮೆಣಸಿನಕಾಯಿ. (೧೩) ಯಾಲಕ್ಕಿ. (೧೪) ಅಡಿಕೆ. (೧೫) ಮೆಣಸು.

IV ಕೆಳಗೆ ಕಾಣಿಸಿದ ಸರಕುಗಳ ಮೇಲೆ ಲಾಯಸೆನ್ಸ ಫೀ ಮಾತ್ರ ವಿದ್ದು ಅವುಗಳ ಮೇಲೆ ಕರ ವಿಲ್ಲ.

(೧) ಗೋದಿ (ಆಟ್ಟಾ, ಮೈದಾ, ರವಾ, ಬ್ರ್ಯಾನ್, ಬ್ರೆಡ್).
(೨) ಭತ್ತ, ಅಕ್ಕಿ (ಅವಲಕ್ಕಿ, ಚುರಮರಿ).
(೩) ಜೋಳ, ರಾಗಿ, ಸಜ್ಜಿ, ನವಣೆ, ಸಾವೆ, ಗೋವಿನಜೋಳ.

## ಕರಪಾತ್ರ ಸರಕುಗಳು.

I ತಾರೀಖು ೧೩-೧೨-೫೭ ರ ವರೆಗೆ ಕೆಳಗೆ ಕಾಣಿಸಿದ ಸರಕುಗಳ ಮೇಲೆ ಮೊದಲನೇ ಹಂತದಲ್ಲಿ ಮಾರಾಟದ ಮೇಲೆ ಈ ಕೆಳಗೆ ತೋರಿಸಿದ ಪ್ರಕಾರ ಕರ ಬೀಳುತ್ತವೆ

೧) ಸಕ್ಕರೆ .... .... .... ನೂರಕ್ಕೆ ೬

೨) ಸಿಗಾರೇಟು ... .... ನೂರಕ್ಕೆ ೩ ರಿಂದ ೩೦

೩) ಬೀಡಿ .... ... .... ನೂರಕ್ಕೆ ೩

II ಕೆಳಗೆ ಕಾಣಿಸಿದ ಸರಕುಗಳ ಮಾರಾಟದ ಮೇಲೆ ಮೊದಲನೆ ಹಂತದಲ್ಲಿ ಕೆಳಗಿನಂತೆ ಕರ ಬೀಳುತ್ತದೆ:—

| | | | |
|---|---|---|---|
| ೧) ಕಡ್ಡಿ ಪೆಟ್ಟಿಗೆ | .... | .... | ನೂರಕ್ಕೆ ೨ ರೂ. |
| ೨) ವನಸ್ಪತಿ | .... | .... | ,, ೫ ,, |
| ೩) ಸೀಮೆ ಎಣ್ಣೆ ( ರಾಕೇಲ ) | | .... | ,, ೨ ,, |
| ೪) ನಸ್ಯ, ತಿನ್ನುವ ತಂಬಾಕು | | .... | ,, ೩ ,, |
| ೫) ಕಾಫೀ ಬೀಜ | .... | .... | ,, ೫ ,, |
| ೬) ಚಹಾ | .... | .... | ,, ೫ ,, |
| ೭) ಹತ್ತೀ ಕಾಳು | .... | ... | ,, ೧ ,, |
| ೮) ಶೇಂಗಾ ಎಣ್ಣೆ | .... | .... | ,, ೨ ,, |
| ೯) ಬಾರದಾನ್ | ... | .... | ,, ೩ ,, |

III ಕೆಳಗೆ ಕಾಣಿಸಿದ ಸರಕುಗಳ ಮೇಲೆ ಮೊದಲನೆ ಹಂತದಲ್ಲಿ ಖರೀದಿಯ ಮೇಲೆ ಕೆಳಗೆ ಕಾಣಿಸಿದಂತೆ ಖರೀದಿ ಕರ ಬೀಳುತ್ತದೆ:—

| | | | |
|---|---|---|---|
| | | | ನೂರಕ್ಕೆ |
| ೧) ಕೊಬ್ಬರಿ, ಟೆಂಗಿನಕಾಯಿ | ... | .... | ೨% |
| ೨) ಮೆಣಸಿನ ಕಾಯಿ | .... | .... | ೨% |
| ೩) ಯಾಲಕ್ಕಿ .... | ... | ... | ೨% |
| ೪) ಮೆಣಸು ( ಕಾಳು ) | .... | .... | ೨% |
| ೫) ಅಡಿಕೆ .... | ... | .... | ೨% |

IV ಕೆಳಗೆ ಕಾಣಿಸಿದ ಸರಕುಗಳ ಮೇಲೆ ಕಡೆಯ ಹಂತದಲ್ಲಿ ಖರೀದಿಯ ಮೇಲೆ ಕೆಳಗೆ ಕಾಣಿಸಿದಂತೆ ಖರೀದಿ ಕರ ಬೀಳುತ್ತದೆ:—

| | | | |
|---|---|---|---|
| | | | ನೂರಕ್ಕೆ |
| ೧) ಗೋಡಂಬಿ, ಗೋಡಂಬಿ ಬೀಜ | | ... | ೨% |
| ೨) ಎಣ್ಣೆಯ ಕಾಳುಗಳು | .... | .... | ೨% |

( ಅಂದರೆ ಶೇಂಗಾ, ಶೇಂಗಾ ಕಾಳು, ಕುಸಬಿ, ಎಳ್ಳು ಸಾಸಿವೆ ವಗೈರೆ. )

## ೧೮. ಸ್ಟೇಶನರಿ ವ್ಯಾಪಾರಸ್ಥರಿಗೆ ಸಂಬಂಧಪಟ್ಟ ಸರಕುಗಳು ಮತ್ತು ಅವುಗಳ ಮೇಲೆ ಬೀಳತಕ್ಕ ಕರಗಳು.

ಮೊದಲನೇ ಹಂತದಲ್ಲಿ ಕೆಳಗೆ ಕಾಣಿಸಿದಂತೆ ಮಾರಾಟ ಕರ ಕೊಟ್ಟರೂ ಅವುಗಳ ಮೇಲೆ ಬಹುಮುಖಿ ಕರವು ೧೦೦ಕ್ಕೆ ೨ ರಂತೆ ಬೀಳುತ್ತದೆ:—

| | ನೂರಕ್ಕೆ |
|---|---|
| ೧) ಸಿಗಾರ, ಹಾಗೂ ಸಿಗಾರೆಟು ಪೆಟ್ಟಿಗೆಗಳು, ಸಿಗಾರ ಹಾಗೂ ಸಿಗಾರೆಟು ಹೊತ್ತಿಸುವ ಸೇದುವ ವಸ್ತುಗಳು .... | ೩% |
| ೨) ಇಸ್ಪೀಟು .... .... .... | ೫% |
| ೩) ಎಲ್ಲ ವಿದ್ಯುತ್ತಿನ ಸರಕುಗಳು ಹಾಗೂ ಸಲಕರಣೆಗಳು, ಅಡಿಗೆಯ ವಸ್ತುಗಳು ಅವುಗಳ ಬಿಡಿ ಭಾಗಗಳು. .... ( ಬಲ್ಬು, ಬೀಸಣಿಕೆ ಸಹಿತ ) | ೨% |
| ೪) ಪೆನ್ನು, ಪೆನ್ಸಿಲು ಮತ್ತು ಅವುಗಳ ಸೆಟ್ಟು ( ೧೦ ರೂ. ಅಥವಾ ಹೆಚ್ಚು ಬೆಲೆಯುಳ್ಳವುಗಳು ) ... .... | ೩% |
| ೫) ಟಾಯಲೆಟ್ಸ ( ಸೌಂದರ್ಯ ವರ್ಧಕ ವಸ್ತುಗಳು ) ... ( ಅಂದರೆ ಸುವಾಸಿಕ ಸಬಕಾರ, ಸುವಾಸಿಕ ಎಣ್ಣೆ, ಸ್ನೋ, ಪಾವಡರ, ದಂತ ಮಂಜನ ) ಟೂಥ ಬ್ರಶ್ ಮತ್ತು ಇತರ ಸುವಾಸಿಕ ವಸ್ತುಗಳು. | ೩% |
| ೬) ಚರ್ಮಜ ವಸ್ತುಗಳು .... ... | ೩% |

ಮೊದಲನೆ ಹಂತದಲ್ಲಿ ಮಾತ್ರ ಮಾರಾಟಕರ ಬೀಳುವ ಮತ್ತು ಬಹುಮುಖಿ ವಿಕ್ರಿ ಕರಕ್ಕೆ ಪಾತ್ರವಿಲ್ಲದ ಸರಕುಗಳು ಮತ್ತು ಅವುಗಳ ಮೇಲೆ ಬೀಳತಕ್ಕ ಕರಗಳು :-

| | ನೂರಕ್ಕೆ |
|---|---|
| (೧) ಹೊಜಿಯರಿ ಸರಕುಗಳು :— | |
| (ಅ) ಕೇವಲ ನೂಲಿನಿಂದ ತಯಾರಿಸಿದ್ದು | ೩% |
| (ಬ) ನೂಲಿನ ಸರಕುಗಳನ್ನು ಬಿಟ್ಟು ಉಳಿದವುಗಳು | ೯% |
| (೨) ಕರ ವಸ್ತ್ರಗಳು .... .... .... | ೩% |
| (೩) ರಬ್ಬರಿನ ಅರಿವೆ, ದಿಂಬುಗಳು ಗಾದಿಗಳು ಹಾಗೂ ಇತರ ವಸ್ತುಗಳು .... .... | ೬% |

**ಉಳಿದ ಎಲ್ಲ ವಸ್ತುಗಳ ಮೇಲೆ ಬಹುಮುಖಿ ಕರವನ್ನು ನೂರಕ್ಕೆ ೨ ರಂತೆ ಕೊಡಬೇಕಾಗುತ್ತದೆ.**

## ೧೯. ಅರಿವೆಯ ವ್ಯಾಪಾರಸ್ಥರಿಗೆ ಸಂಬಂಧಪಟ್ಟ ಸರಕುಗಳು ಮತ್ತು ಅವುಗಳ ಮೇಲೆ ಬೀಳತಕ್ಕ ಕರಗಳು.

ಲಾಯಸೆನ್ಸ ಫೀಗೆ ಒಳಪಟ್ಟ ಸರಕುಗಳ ಯಾದಿ ಮತ್ತು

ಲಾಯಸೆನ್ಸ ಫೀ :—

(೧) ಕಚ್ಚಾ ರೇಶಿಮೆ, ಸಿಲ್ಕೇಚರ ರೇಶಿಮೆ, ಮತ್ತು ಚರಖಾ ರೇಶಿಮೆ, ಕೈಯಿಂದ ಹುರಿ ಮಾಡಿದ್ದು, ಪ ಒಣ್ಣ ಮಾಡಿದ್ದು ಕೃತ್ರಿಮ ರೇಶಿಮೆ ( ಚಮಕಾ ಬಿಟ್ಟು ) ಒಂದು ಸಾವಿರಕ್ಕೆ ೧=೫೦

(೨) ಕೈಮಗ್ಗದ ಅರಿವೆ ,, ೧=೫೦

ಕೇವಲ ಮೊದಲನೇ ಹಂತದಲ್ಲಿ ಮಾತ್ರ ವ್ಯಾಪಾರಾಟ ಕರ ಬೀಳುವ ಸರಕುಗಳು :— ನೂರಕ್ಕೆ

(೧) ಗಿರಣಿಯ ಜಿನಗು ಅತಿ ಜಿನಗು ನೂಲಿನ ಅರಿವೆ ( ಕೈ ಮಗ್ಗ ಹಾಗೂ ಪಾವರ ಲೂಮುಗಳಲ್ಲಿ ನೆಯ್ದ ಅರಿವೆಯನ್ನು ಬಿಟ್ಟು ) .... ೯%

(೨) ರೇಶಿಮೆ, ಚಮಕಾ, ಉಣ್ಣೆ ನಾರು ಇವುಗಳಿಂದ ತಯಾರಾದ ಆದರೆ ಬರೆ ಅರಳೆಯ ನೂಲಿನಿಂದ ತಯಾರಾಗದೆ ಇದ್ದ ಅರಿವೆ ( ಕೈಮಗ್ಗ ಹಾಗೂ ಪಾವರ ಲೂಮುಗಳಲ್ಲಿ ನೆಯ್ದ ಅರಿವೆಯನ್ನು ಬಿಟ್ಟು ) .... .... ೯%

(೩) ಮಧ್ಯಮ ತರಗತಿಯ ನೂಲಿನ ಅರಿವೆ ( ಕೈಮಗ್ಗ ಹಾಗೂ ಪಾವರ ಲೂಮುಗಳಲ್ಲಿ ನೆಯ್ದ ಅರಿವೆಯನ್ನು ಬಿಟ್ಟು ) ೬%

(೪) ಉರುಟು ನೂಲಿನ ಅರಿವೆ ( ಕೈಮಗ್ಗ ಹಾಗೂ ಪಾವರ ಲೂಮುಗಳಲ್ಲಿ ನೆಯ್ದ ಅರಿವೆಯನ್ನು ಬಿಟ್ಟು ) .... ೩%

(೫) ಪಾವರ ಲೂಮುಗಳಲ್ಲಿ ತಯಾರಿಸಿದ ಜಿನಗು ಅತಿ ಜಿನಗು ನೂಲಿನ ಅರಿವೆ .... .... ೬%

(೬) ಪಾವರ ಲೂಮುಗಳಲ್ಲಿ ತಯಾರಿಸಿದ ಮಧ್ಯಮ ತರಗತಿಯ ಹಾಗೂ ಉರುಟು ನೂಲಿನ ಅರಿವೆ ... .... ೩%

(೭) ಪಾವರ ಲೂಮುಗಳಲ್ಲಿ ನೆಯ್ದ ನೂಲಿನ ಅರಿವೆಯನ್ನು ಬಿಟ್ಟು ಉಳಿದ ಅರಿವೆ ... .... ೪%

(೮) ಸಂಪೂರ್ಣವಾಗಿ ಅರಳೆಯು ನೂಲಿನಿಂದ ಮಾಡದೆ ಇದ್ದ ಉಳಿದ ಎಲ್ಲ ಹೊಜಿಯರಿ ಸರಕುಗಳು . ೯%

(೯) ಅರಳೆಯು ನೂಲಿನಿಂದ ಮಾಡಿದ ಹೊಜಿಯರಿ ಸರಕು ... ೩%

(೧೦) ತಯಾರಿ ಅರಿವೆ ... .... .... ೩%

## ೨೦. ತಾಮ್ರ, ಹಿತ್ತಾಳಿ ಪಾತ್ರೆಗಳ ಸರಕುಗಳ ವ್ಯಾಪಾರಸ್ಥರಿಗೆ ಸಂಬಂಧಪಟ್ಟದ್ದು.

(೧) ಈ ಕೆಳಗಿನ ಮಾಲುಗಳ ಮೇಲೆ ಮೊದಲನೇ ಹಂತದಲ್ಲಿ ಈ ಕೆಳಗಿನಂತೆ ಕರ ಬಿದ್ದರೂ ಅವುಗಳಮೇಲೆ ಬಹುಮುಖಿ ವಿಕ್ರಿ ಕರವು ಬೀಳುತ್ತದೆ:— ನೂರಕ್ಕೆ

(೧) ಸ್ಟೇನ್‌ಲೆಸ್ ಸ್ಟೀಲ ಪಾತ್ರೆಗಳು ಮತ್ತು ಅದರ ತಗಡು ೨%

(೨) ಇವುಗಳನ್ನುಳಿದ ಯಾವತ್ತೂ ಸರಕುಗಳ ಮೇಲೆ ನೂರಕ್ಕೆ ೨ ರಂತೆ ಬಹುಮುಖಿ ವಿಕ್ರಿ ಕರವನ್ನು ಕೊಡಬೇಕಾಗುವದು.

## ೨೧. ಸರಾಫಿ ( ಬೆಳ್ಳಿ ಬಂಗಾರ ) ವ್ಯಾಪಾರಸ್ಥರಿಗೆ ಸಂಬಂಧ ಪಟ್ಟದ್ದು.

I ಲಾಯಸೆನ್ಸ ಫೀಗೆ ಒಳಪಟ್ಟ ಸರಕುಗಳು.

(ಅ) ಗಟ್ಟಿ ಬೆಳ್ಳಿ, ಗಟ್ಟಿ ಬಂಗಾರ ಒಂದು ಸಾವಿರಕ್ಕೆ ೧ ರೂ.

II ಕೆಳಗೆ ಕಾಣಿಸಿದ ಸರಕುಗಳ ಮೇಲೆ ಮೊದಲನೇ ಹಂತದಲ್ಲಿ ಕೆಳಗೆ ಕಾಣಿಸಿದಂತೆ ಮಾರಾಟ ಕರವು ಬೀಳುವದಲ್ಲದೆ ಬಹುಮುಖಿ ವಿಕ್ರಿ ಕರವು ೧೦೦ ಕ್ಕೆ ೨ ರಂತೆ ಬೀಳುತ್ತದೆ.

(ಅ) ಖರೇ ಹರಳು ಕಲ್ಲುಗಳು, ವಜ್ರ, ಮಾಣಿಕ ಖರೇ ಮುತ್ತು, ( ಇವುಗಳನ್ನು ಬಿಡಿಯಾಗಿ ಮಾರಿದರೂ ಅಥವಾ ಆಭರಣಗಳಲ್ಲಿ ಕೂಡ್ರಿಸಿ ಮಾರಿದರೂ ಸಹ ) ನೂರಕ್ಕೆ ೩%

III ಮೇಲೆ ಕಾಣಿಸಿದ ಸರಕುಗಳನ್ನು ಹೊರತು ಪಡಿಸಿ ಉಳಿದ ಎಲ್ಲ ಬೆಳ್ಳಿ ಬಂಗಾರದ ಸರಕುಗಳ ಮೇಲೆ ನೂರಕ್ಕೆ ೧ ರಂತೆ ಬಹುಮುಖಿ ವಿಕ್ರಿ ಕರ ಬೀಳುತ್ತದೆ

## ಪರಿಶಿಷ್ಟ—೧

೫ (೧) ನೆಯ ಕಲಮಿನನ್ವಯ ಕೊಡುವ ಸಾಮಾನ್ಯ ವಹಿವಾಟದ ಕರ ವಲ್ಲದೆ, ೫ (೨) ನೆಯ ಕಲಮಿನನ್ವಯ ಮೊದಲನೆಯ ಮಾರಾಟದ ಮೇಲೆ ಒಂದನೇ ಹಂತದಲ್ಲಿ ಹೆಚ್ಚಿನ ಕರ ಬೀಳುವ ಸರಕುಗಳು.

| ನಂ. | ಸರಕುಗಳ ವಿವರ | ಕರದ ದರ |
|---|---|---|
| ೧ | ಬರ್ಫದ ತಿಜೋರಿಗಳು, ಹವೆಯ ಸಮತೆ ಕಾಯುವ ಯಂತ್ರಗಳು ಹಾಗೂ ಅವುಗಳ ಬಿಡಿಭಾಗಗಳು. | ನೂರಕ್ಕೆ ೫ |
| ೨ | ವಾಯರಲೆಸ್ ಉಪಕರಣ ಹಾಗೂ ಅವುಗಳ ಬಿಡಿ ಭಾಗಗಳು (ವ್ಹಾಲ್ವ್, ಅಕ್ಯುಮುಲೇಟರ್, ಆ್ಯಂಪ್ಲಿಫಾಯರ್, ರೇಡಿಯೋ ಲೌಡಸ್ಪೀಕರ ಮೊದಲಾದವು). | ನೂರಕ್ಕೆ ೫ |
| ೩ | ರೇಡಿಯೋ ಗ್ರಾಮಾಫೋನುಗಳು ಹಾಗೂ ಅವುಗಳ ಬಿಡಿ ಭಾಗಗಳು. | ನೂರಕ್ಕೆ ೫ |
| ೪ | ಸಿನೇಮಾ, ಫೋಟೋ ಹಾಗೂ ಇತರ ಕ್ಯಾಮರಾಗಳು, ಪ್ರೊಜೆಕ್ಟರುಗಳು, ಹಾಗೂ ಎನ್ಲಾರ್ಜ ಮಾಡುವ ಉಪಕರಣಗಳು, ಲೆನ್ಸುಗಳು, ಕ್ಯಾಮರಾ, ಪ್ರೊಜೆಕ್ಟರುಗಳ ಬಿಡಿ ಭಾಗಗಳು, ಹಾಗೂ ಅವುಗಳ ಉಪಯೋಗಕ್ಕೆ ಬೇಕಾಗುವ ಫಿಲ್ಮುಗಳು, ಪ್ಲೇಟುಗಳು, ಪೇಪರು ಹಾಗೂ ಅರಿವೆ. | ನೂರಕ್ಕೆ ೫ |
| ೫ | ದುರ್ಬೀನುಗಳು ಹಾಗೂ ಇತರ ಪ್ರೇಕ್ಷಕ ಉಪಕರಣಗಳು. | ನೂರಕ್ಕೆ ೫ |
| ೬ | ಎಲ್ಲ ಬಗೆಯ ಗ್ರಾಮಾಫೋನುಗಳು (ರೇಡಿಯೋ ಗ್ರಾಮಾಫೋನುಗಳನ್ನು ಹೊರತುಪಡಿಸಿ) ಧ್ವನಿಮುದ್ರಕಗಳು, ಮೊಳೆಗಳು ಹಾಗು ಅವುಗಳ ಬಿಡಿ ಭಾಗಗಳು. | ನೂರಕ್ಕೆ ೫ |
| ೭ | ಎಲ್ಲ ಬಗೆಯ ಕುತನಿ ಗಾದಿಯ ಖುರ್ಚಿ ಮೇಜುಗಳು, ಕಬ್ಬಿಣ ಉಕ್ಕಿನ ಖುರ್ಚಿ ಮೇಜುಗಳು, ಕಪಾಟು ತಿಜೋರಿಗಳು ಸಹಿತ. | ನೂರಕ್ಕೆ ೫ |
| ೮ | ಸಿಗಾರ ಹಾಗು ಸಿಗಾರೇಟ ಪೆಟ್ಟಿಗೆಗಳು, ಸಿಗಾರ ಹಾಗೂ ಸಿಗಾರೇಟ ಹೊತ್ತಿಸುವ, ಸೇದುವ ವಸ್ತುಗಳು. | ನೂರಕ್ಕೆ ೩ |
| ೯ | ಎಲ್ಲ ಬಗೆಯ ಇಸ್ಪೇಟ ಎಲೆಗಳು. | ನೂರಕ್ಕೆ ೫ |

| ಕ್ರ. ಸಂ. | ಸರಕುಗಳ ವಿವರ | ಕರದ ದರ |
|---|---|---|
| ೧೦ | ಎಲ್ಲ ವಿದ್ಯುತ್ ಸರಕುಗಳು, ಸಲಕರಣೆಗಳು, ಪಂಖಾಗಳು, ಬಲ್ಬುಗಳು, ಅಡಿಗೆಯ ಉಪಕರಣಗಳು ಸಹಿತ, ಅವುಗಳ ಬಿಡಿಭಾಗಗಳು. | ನೂರಕ್ಕೆ ೨ |
| ೧೧ | ಪೆನ್ನು, ಪೆನ್ಸಿಲ್ಲು, ಅವುಗಳ ಜೋಡಿ— (ಹತ್ತು ರೂಪಾಯಿ ಹಾಗೂ ಅದಕ್ಕೂ ಹೆಚ್ಚು ಬೆಲೆಗೆ ಮಾರತಕ್ಕಂತಹವು.) | ನೂರಕ್ಕೆ ೩ |
| ೧೨ | ಎಲ್ಲ ಗಡಿಯಾರಗಳು, ಟಾಯಿಂಪೀಸುಗಳು, ವಾಚುಗಳು ಹಾಗೂ ಅವುಗಳ ಬಿಡಿ ಭಾಗಗಳು. | ನೂರಕ್ಕೆ ೩ |
| ೧೩ | ಹರಳುಕಲ್ಲುಗಳು, ಅಂದರೆ, ರತ್ನ, ವಜ್ರ, ಮಾಣಿಕ್ಯ, ಪಕ್ಕಾ ಮುತ್ತು (ಬಿಡಿಯಾಗಿ ಇಲ್ಲವೆ ಆಭರಣದಲ್ಲಿ ಕೂಡಿಸಿ ಮಾರಿದರೂ ಸಹ) | ನೂರಕ್ಕೆ ೩ |
| ೧೪ | ಸೌಂದರ್ಯವರ್ಧಕ ವಸ್ತುಗಳು, (ಗ್ಯಾಜಿಟ್‌ದಲ್ಲಿ ಪ್ರಕಟಿಸುವ ಸೌಂದರ್ಯವರ್ಧಕ ವಸ್ತುಗಳನ್ನು ಹೊರತು ಪಡಿಸಿ.) | ನೂರಕ್ಕೆ ೩ |
| | ಸ್ಪಷ್ಟೀಕರಣ:— ಮನುಷ್ಯನ ಶರೀರದ ಪರಿಮಳಕ್ಕಾಗಿ ಇಲ್ಲವೆ ತ್ವಚೆ, ಕೂದಲು, ಹಾಗೂ ಹಲ್ಲುಗಳ ಸ್ವಚ್ಛತೆ, ಸುಧಾರಣೆ ಇಲ್ಲವೆ ರೂಪ ಒದಲಿಸುವಿಕೆಗಳಿಗೆ ಉಪಯೋಗಿಸುವ ವಸ್ತುಗಳೆಲ್ಲ ಸೌಂದರ್ಯ ವರ್ಧಕ ವಸ್ತುಗಳು. | ನೂರಕ್ಕೆ ೪ |
| ೧೫ | ಮದ್ದಿನ ಸಲಕರಣೆಗಳು. | ನೂರಕ್ಕೆ ೪ |
| ೧೬ | ಉಣ್ಣೆಯು ಚರ್ಮ ಹಾಗು ಚರ್ಮ (ದನ, ಕುರಿ, ಆಡುಗಳ ಚರ್ಮ ಹೊರತುಪಡಿಸಿ) ಹಾಗೂ ಅವುಗಳಿಂದ ಮನೆತನದ ಉಪಯೋಗಕ್ಕೆ ಮಾಡಿದ್ದ ವಸ್ತುಗಳು. | ನೂರಕ್ಕೆ ೬ |
| ೧೭ | ಸ್ಟೇನಲೆಸ್ ಉಕ್ಕು ಹಾಗೂ ಅದರಿಂದ ಮಾಡಿದ ವಸ್ತುಗಳು (ಕಾರಖಾನೆಯು ಉದ್ಯಮದ ಸಲುವಾಗಿ ಉಪಯೋಗಿಸುವ ವಸ್ತುಗಳನ್ನು ಹೊರತುಪಡಿಸಿ) | ನೂರಕ್ಕೆ ೨ |
| ೧೮ | ತೊಗಲಿನ ಸರಕುಗಳು (೫ ನೆಯ ಯಾದಿಯಲ್ಲಿ ಅ.ನಂ. ೨೮ ರಲ್ಲಿ ಕಾಣಿಸಿದ ಸರಕುಗಳನ್ನು ಹೊರತುಪಡಿಸಿ.) | ನೂರಕ್ಕೆ ೩ |

## ಪರಿಶಿಷ್ಟ—೨

೫ (೩) (ಅ) ಕಲಮಿನನ್ವಯ ರಾಜ್ಯದೊಳಗಿನ ಮೊದಲನೆಯ ಇಲ್ಲವೆ ಒಬ್ಬರಿಂದೊಬ್ಬರು ವರ್ತಕರಿರುವಲ್ಲಿ ಮೊದಲನೆಯ ವರ್ತಕನ ಮೇಲೆ ಒಂದೇ ಹಂತದ ಮಾರಾಟದ ಕರ ಬೀಳುವ ಸರಕುಗಳು.

| ಸಂ. ೨ | ಸರಕುಗಳ ವಿವರ | ಕರದ ದರ |
|---|---|---|
| ೧ | ಜಿನಗು ಹಾಗೂ ಅತಿ ಜಿನಗು ಅರಿವೆ (ಕೈಮಗ್ಗ ಹಾಗೂ ಪವರ ಲೂಮುಗಳಲ್ಲಿ ನೇಯ್ದ ಅರಿವೆಯನ್ನು ಹೊರತು ಪಡಿಸಿ) | ನೂರಕ್ಕೆ ೯ |
| ೨ | ರೇಶಿಮೆಯ, ಚಮಕಾ ರೇಶಿಮೆಯ, ಉಣ್ಣೆಯ, ನಾರಿನ, ಇಲ್ಲವೆ ಸಂಪೂರ್ಣವಾಗಿ ಅರಳೆಯಿಂದ ತಯಾರಾಗದೆ ಇದ್ದ ವಸ್ತುವಿನ ಅರಿವೆ (ಕೈಮಗ್ಗ ಹಾಗೂ ಪವರ ಲೂಮುಗಳಲ್ಲಿ ನೇಯ್ದ ಅರಿವೆ ಹೊರತುಪಡಿಸಿ) | ನೂರಕ್ಕೆ ೯ |
| ೩ | ಮಧ್ಯಮ ತರಗತಿಯ ನೂಲಿನ ಅರಿವೆ (ಕೈಮಗ್ಗ ಹಾಗೂ ಪವರ ಲೂಮುಗಳಲ್ಲಿ ನೇಯ್ದ ಅರಿವೆ ಹೊರತುಪಡಿಸಿ) | ನೂರಕ್ಕೆ ೬ |
| ೪ | ಉರುಟು ನೂಲಿನ ಅರಿವೆ (ಕೈಮಗ್ಗ ಹಾಗೂ ಪವರ ಲೂಮುಗಳಲ್ಲಿ ನೇಯ್ದ ಅರಿವೆಯನ್ನು ಹೊರತುಪಡಿಸಿ) | ನೂರಕ್ಕೆ ೩ |
| ೫ | ಪವರ ಲೂಮುಗಳಲ್ಲಿ ನೇಯ್ದ ಜಿನಗು ಹಾಗು ಅತಿ ಜಿನಗು ಅರಿವೆ. | ನೂರಕ್ಕೆ ೬ |
| ೬ | ಪವರ ಲೂಮುಗಳಲ್ಲಿ ನೇಯ್ದ ಮಧ್ಯಮತರಗತಿಯ ಹಾಗು ಉರುಟು ನೂಲಿನ ಅರಿವೆ. | ನೂರಕ್ಕೆ ೩ |
| ೭ | ಪವರ ಲೂಮುಗಳಲ್ಲಿ ನೇಯ್ದ ನೂಲಿನ ಅರಿವೆ ಹೊರತು ಪಡಿಸಿ ಇತರ ಅರಿವೆ. | ನೂರಕ್ಕೆ ೪ |
| ೮ | ಸಂಪೂರ್ಣವಾಗಿ ಅರಳೆಯ ನೂಲಿನಿಂದ ಮಾಡದೆ ಇದ್ದ ಎಲ್ಲ ಹೆಣಿಕೆಯ ಸರಕುಗಳು. | ನೂರಕ್ಕೆ ೯ |
| ೯ | ಅರಳೆಯ ನೂಲಿನಿಂದ ಮಾಡಿದ ಹೆಣಿಕೆಯ ಸರಕುಗಳು. | ನೂರಕ್ಕೆ ೩ |

| ಕ್ರ. ಸಂ. | ಸರಕುಗಳ ವಿವರ | ಕರದ ದರ |
|---|---|---|
| ೧೦ | ಬಂದೂಕ, ರಾಯಫಲ್, ಪಿಸ್ತೂಲ ರಿವ್ಹಾಲ್ವ್ಹರ್, ಹಾಗೂ ಮದ್ದು ಗುಂಡುಗಳು ಮೊದಲಾದುವು | ನೂರಕ್ಕೆ ೫ |
| ೧೧ | ಡ್ರುಗೆಟ್ಸ್ .... ... ... ... ... | ನೂರಕ್ಕೆ ೬ |
| ೧೨ | ಕಚ್ಚಾ ಹಂಚು ಹಾಗೂ ಇಟ್ಟಂಗಿಗಳನ್ನು ಹೊರತುಪಡಿಸಿ ಇತರ ಹಂಚುಗಳು ಹಾಗೂ ಇಟ್ಟಂಗಿಗಳು. | ನೂರಕ್ಕೆ ೩ |
| ೧೩ | ಸಂಗಮರವರಿ ಕಲ್ಲು ಹಾಗೂ ಸಂಗಮರವರಿ ಕಲ್ಲಿನಿಂದ ಮಾಡಿದ ವಸ್ತುಗಳು. | ನೂರಕ್ಕೆ ೪ |
| ೧೪ | ಸಾಯಕಲ್, ಸಾಯಕಲ್ ಬಿಡಿಭಾಗಗಳು. | ನೂರಕ್ಕೆ ೪ |
| ೧೫ | ಧ್ವನಿಗ್ರಾಹಕ ಯಂತ್ರಗಳು ಹಾಗೂ ತತ್ಸಂಬಂಧದ ವಸ್ತುಗಳು. | ನೂರಕ್ಕೆ ೭ |
| ೧೬ | ರಬ್ಬರ ಹಾಳಿಗಳು, ದಿಂಬುಗಳು, ಗಾದಿಗಳು, ಹಾಗೂ ಇತರ ವಸ್ತುಗಳು | ನೂರಕ್ಕೆ ೬ |
| ೧೭ | ಟೆಲಿಫೋನ ಲೌಡಸ್ಪೀಕರ ಸಹಿತ ಎಲ್ಲ ಧ್ವನಿವಾಹಕ ಯಂತ್ರಗಳು. | ನೂರಕ್ಕೆ ೭ |
| ೧೮ | ಟಾಯಿಪ ರಾಯ್ಟರ್, ಸಾಯಕ್ಲೋಸ್ಟಾಯಿಲ್ ಯಂತ್ರ ಮೊದಲಾದುವು | ನೂರಕ್ಕೆ ೪ |
| ೧೯ | ವಿದ್ಯುಚ್ಛಕ್ತಿನಿಂದ ಇಲ್ಲವೆ ನೀರಿನ ಶಕ್ತಿಯಿಂದ ನಡೆಯುವ ತೊಟ್ಟಿಲುಗಳು. | ನೂರಕ್ಕೆ ೪ |
| ೨೦ | ಎಲ್ಲ ಯಂತ್ರೋಪಕರಣಗಳು ಹಾಗೂ ಅವುಗಳ ಬಿಡಿಭಾಗಗಳು. | ನೂರಕ್ಕೆ ೪ |

| ಸಂ. | ಸರಕುಗಳ ವಿವರ | ಕರದ ದರ |
|---|---|---|
| ೨೧ | ಕಲ್ಲಿನಿಂದ ಸಿಮೆಂಟಿನಿಂದ ಹಾಗೂ ಕಬ್ಬಿಣದಿಂದ ಮಾಡಿದ ನಳ ಹಾಗು ಜೋಡಣೆ ಬಿಟ್ಟು ಇತರ ಆರೋಗ್ಯ ರಕ್ಷಕ ಉಪಕರಣಗಳು. | ನೂರಕ್ಕೆ ೪ |
| ೨೨ | ಎಕ್ಸ್‌ರೇ ಉಪಕರಣ ಹಾಗೂ ಸಾಮಾನುಗಳು. | ನೂರಕ್ಕೆ ೪ |
| ೨೩ | ವಿಮಾನಗಳು, ರೇಲ್ವೆ ಡಬ್ಬಿಗಳು ಹಾಗೂ ಅವುಗಳ ಬಿಡಿಭಾಗಗಳು. | ನೂರಕ್ಕೆ ೬ |
| ೨೪ | ಎಲ್ಲ ಬಗೆಯ ಗಿರಣಿಯ ನೂಲು (ಅರಳೆಯ ನೂಲು ಹಾಗೂ ಹೊಲಿಯುವ ದಾರ ಬಿಟ್ಟು ) | ನೂರಕ್ಕೆ ೩/೪ |
| ೨೫ | ಬಿಸಾಟಿದ ರೇಶಿಮೆ. (Silk waste) | ನೂರಕ್ಕೆ $\frac{3}{4}$ |
| ೨೬ | ಬೆಂಕಿ ಕಡ್ಡಿಗಳು (ಮದ್ದು ಹಾರಿಸುವಾಗ ಉಪಯೋಗಿಸುವ ಕಡ್ಡಿಗಳನ್ನು ಬಿಟ್ಟು) | ನೂರಕ್ಕೆ ೨ |
| ೨೭ | ಒಂದು ಸಿಗರೇಟಿಗೆ ೨ ನಯೆ ಪೈಸೆಗಿಂತ ಹೆಚ್ಚಿನ ಬೆಲೆಗೆ ಮಾರದೆ ಇರುವ ಸಿಗರೇಟುಗಳು. | ನೂರಕ್ಕೆ ೩ |
| ೨೮ | ಒಂದು ಸಿಗರೇಟಿಗೆ ೩ ನಯೆಪೈಸೆಗಿಂತ ಹೆಚ್ಚಿನ ಬೆಲೆಗೆ ಮಾರದೆ ಇರುವ ಸಿಗರೇಟುಗಳು. | ನೂರಕ್ಕೆ ೧೦ |
| ೨೯ | ಒಂದು ಸಿಗರೇಟಿಗೆ ೫ ನಯೆ ಪೈಸೆಗಿಂತ ಹೆಚ್ಚಿನ ಬೆಲೆಗೆ ಮಾರದೆ ಇರುವ ಸಿಗರೇಟುಗಳು. | ನೂರಕ್ಕೆ ೨೦ |
| ೩೦ | ೨೭, ೨೮, ೨೯, ರಲ್ಲಿ ಕಾಣಿಸದೆ ಇದ್ದ ಇತರ ಸಿಗರೇಟುಗಳು | ನೂರಕ್ಕೆ ೩೦ |
| ೩೧ | ಸಿಗಾರ, ಚಿರೂಟ, ಒಂದಕ್ಕೆ ೧೨ ನಯೆಪೈಸೆಗಿಂತ ಕಡಿಮೆ ಬೆಲೆ ಇರತಕ್ಕವು. | ನೂರಕ್ಕೆ ೪ |
| ೩೨ | ೩೧ ರಲ್ಲಿ ಕಾಣಿಸದೆಇದ್ದ ಇತರ ಸಿಗಾರುಗಳು, ಚಿರೂಟುಗಳು | ನೂರಕ್ಕೆ ೩೦ |

| ಅ.ನಂ. | ಸರಕುಗಳ ವಿವರ | ಕರದ ದರ |
|---|---|---|
| ೩೩ | ಸಿಗರೇಟಿನ ತಂಬಾಕ ಹಾಗೂ ಪುಡಿಯ ತಂಬಾಕ ಮೊದಲನೆಯ ಪತ್ರಕದಿಂದ ವಾರಲ್ಪಟ್ಟಿದ್ದಾಗ | ನೂರಕ್ಕೆ ೩೦ |
| ೩೪ | ಸಕ್ಕರೆ .... .... .... .... .... | ನೂರಕ್ಕೆ ೬ |
| ೩೫ | ಡಾಲ್ಡಾ. ಸಕಾವ ಇಲ್ಲವೆ ಪರಿಶುದ್ಧಗೊಳಿಸಿದ ವನಸ್ಪತಿ ತುಪ್ಪ | ನೂರಕ್ಕೆ ೫ |
| ೩೬ | ಸಿಮೆಂಟು .... .... .... .... .... | ನೂರಕ್ಕೆ ೫ |
| ೩೭ | ಸೀಮೆಎಣ್ಣೆ ... .... .... .... .... | ನೂರಕ್ಕೆ ೨ |
| ೩೮ | ಬೀರು ಸಹಿತ ಎಲ್ಲ ಮದ್ಯಗಳು (ಭಟ್ಟಿ ಸರಾಯಿ ಬಿಟ್ಟು) | ನೂರಕ್ಕೆ ೨೫ |
| ೩೯ | ಸಿಂದಿಯನ್ನು ಬಿಟ್ಟು ಇತರ ಭಟ್ಟಿ ಸರಾಯಿ. | ನೂರಕ್ಕೆ ೩ |
| ೪೦ | ಅಫು, ಗಾಂಜಿ ಹಾಗೂ ಭಾಂಗ. | ನೂರಕ್ಕೆ ೩ |
| ೪೧ | ಸ್ಪಿರಿಟ್ ಮಿಶ್ರಿತ ಔಷಧಿಯ ವಸ್ತುಗಳು. | ನೂರಕ್ಕೆ ೪ |
| ೪೨ | ಬೀಡಿ, ನಸ್ಯ, ತಿನ್ನುವ ತಂಬಾಕು, ಇಲ್ಲವೆ ತಂಬಾಕಿನಿಂದ ಮಾಡಿದ ಇತರ ವಸ್ತುಗಳು. | ನೂರಕ್ಕೆ ೩ |
| ೪೩ | ಕಾಫೀ ಬೀಜಗಳು... .... .... ... | ನೂರಕ್ಕೆ ೫ |
| ೪೪ | ಚಹ .... .... .... ... .... | ನೂರಕ್ಕೆ ೫ |
| ೪೫ | ಇಮಾರತಿ ಕಟ್ಟಿಗೆ .... .... .... .... | ನೂರಕ್ಕೆ ೩ |
| ೪೬ | ಹತ್ತೀಕಾಳು .... .... .... .... | ನೂರಕ್ಕೆ ೧ |
| ೪೭ | ಸೇಂಗಾ ಎಣ್ಣೆ ೫ ನೆಯ ಪರಿಶಿಷ್ಟ ೨೮ ನೆಯ ಅನುಕ್ರಮ ನಂಬರದಲ್ಲಿ ಕಾಣಿಸಿದ ಸೇಂಗಾ ಎಣ್ಣೆ ಬಿಟ್ಟು) | ನೂರಕ್ಕೆ ೨ |

| ಅ ನಂ. | ಸರಕುಗಳ ವಿವರ | ಕರದ ದರ |
|---|---|---|
| ೪೮ | ರಸಾಯನ ಗೊಬ್ಬರಗಳು, ಎಲುವಿನ ಪುಡಿ ಹಾಗೂ ಹಿಂಡಿ | ನೂರಕ್ಕೆ ೧ |
| ೪೯ | ಜರಿ .... .... ... .... ... | ನೂರಕ್ಕೆ ೨ |
| ೫೦ | ಗೋಣಿಯ ಚೀಲ ಹಾಗೂ ಬಾರದಾನ | ನೂರಕ್ಕೆ ೩ |
| ೫೧ | ತಯ್ಯಾರ ಅರಿವೆಗಳು. | ನೂರಕ್ಕೆ೩ |

---

ಸ್ಪಷ್ಟೀಕರಣ—೧.

ಅನುಕ್ರಮ ನಂಬರ ೧,೩,೪,೫ ಹಾಗೂ ೬ ನೆಯದರಲ್ಲಿ ಕಾಣಿಸಿದ ಜಿನಸು ಅತಿ ಜಿನಗು, ಮಧ್ಯಮ ತರಗತಿ ಇಲ್ಲವೆ ಉರುಟು ನೂಲಿನ ಅರಿವೆ ಯೆಂದರೆ ಅರಳೆಯ ಅರಿವೆಯ ನಿಯಂತ್ರಣದ ಹುಕುಮು, ೧೯೪೮ ನೆಯದರನ್ವಯ ಪ್ರಕಟ ನೆಯ ಮೂಲಕ ಜಿನಗು, ಅತಿ ಜಿನಗು, ಮಧ್ಯಮ ತರಗತಿ ಇಲ್ಲವೆ ಉರುಟು ಎಂದು ವರ್ಗೀಕರಿಸಲಾದ ಅರಿವೆ; ಇಲ್ಲವೆ ಒಂದುವೇಳೆ ಇಂತಹ ವರ್ಗೀಕರಣ ಮಾಡಿರದಿದ್ದರೆ ಇಲ್ಲವೆ ಆ ಹುಕುಮು ಅನ್ವಯಿಸದೆ ಇದ್ದರೆ, ರಾಜ್ಯ ಸರಕಾರವು ತನ್ನ ವಿಶೇಷ ಇಲ್ಲವೆ ಸಾಮಾನ್ಯ ಹುಕುಮಿನ ಮೂಲಕ ಜಿನಗು, ಅತಿ ಜಿನಗು, ಮಧ್ಯಮ ತರಗತಿ ಇಲ್ಲವೆ ಉರುಟು ಎಂದು ಆ ವಿಷಯದಲ್ಲಿ ಕರಹಾಕುವ ಸಲುವಾಗಿ ಅದರೊಳಗೆ ಕಾಣಿಸಿದ ತಾರೀಖಿನಿಂದ ವರ್ಗೀಕರಣ ಮಾಡಿದ ಅರಿವೆ.

ಸ್ಪಷ್ಟೀಕರಣ—೨

ಅನುಕ್ರಮ ನಂಬರ ೩೮ ಹಾಗೂ ೩೯ರಲ್ಲಿ ಕಾಣಿಸಿದ "ಭಟ್ಟೀ ಸೆರೆ" ಎಂದರೆ ಹಿಂದುಸ್ತಾನದಲ್ಲಿ ತಯಾರಾದ ಸೆರೆ; ಆದರೆ ಅದರಲ್ಲಿ ವಿದೇಶದಿಂದ ಆಮದು ಮಾಡುವ ಸೆರೆಗಳಿಗೆ ಹೋಲುವ ಹಿಂದುಸ್ತಾನದಲ್ಲಿ ಮಾಡಿದ ಜಿನ್, ಬ್ರಾಂಡಿ, ವ್ಹಿಸ್ಕಿ ಇಲ್ಲವೆ ರಮ್ ಮೊದಲಾದವು ಅಡಕವಾಗುವುದಿಲ್ಲ.

ಸ್ಪಷ್ಟೀಕರಣ—೩.

ಅನುಕ್ರಮ ನಂಬರ ೪೩ನೆಯದರನ್ವಯ ಕಾಫಿ ಬೀಜದ ಖರೀದಿಯ ಸಂಬಂಧದಲ್ಲಿ ಒಮ್ಮೆ ಕರ ಬಿದ್ದಿದ್ದರೆ, ಆ ಬೀಜದಿಂದ ಮಾಡಿದ ಕಾಫಿ ಪುಡಿಗೆ ಈ ಕಾಯ್ದೆಯನ್ವಯ ಕರಬೀಳುವದಿಲ್ಲ.

# ಪರಿಶಿಷ್ಟ—೩

೫ (೩) (b) ಕಲಮಿನನ್ವಯ ಒಂದೇ ಸ್ಥಾನದಲ್ಲಿ ಖರೀದಿಯು ಕರ ಬೀಳುವ ಸರಕುಗಳು.

| ಸಂ. | ಸರಕುಗಳ ವಿವರ | ಕರಬೀಳುವ ಸ್ಥಾನ | ಕರದ ದರ |
|---|---|---|---|
| ೧ | ತೆಂಗಿನಕಾಯಿ ಹಾಗೂ ಕೊಬ್ಬರಿ | ಈಕಾಯ್ದೆಯನ್ವಯ ಕರಕೊಡಲು ಹೊಣೆಯಾಗುವ ಮೊಟ್ಟ ಮೊದಲಿನ ವರ್ತಕನ ರಾಜ್ಯದೊಳಗಿನ ಮೊದಲಿನ ಖರೀದಿಯು ಮೇಲೆ. | ನೂರಕ್ಕೆ೨ |
| ೨ | ತರವಾರ, ತಂಗಡಿ, ಕಕ್ಕೆ ಹಾಗೂ ಇತರ ಹದಮಾಡುವ ತೊಗಟೆಗಳು | ,, | ನೂರಕ್ಕೆ೨ |
| ೩ | ಕಚ್ಚಾ ತಂಬಾಕು— | | |
| | (ಅ) ವ್ಹರ್ಜಿನಿಯ ನಮೂನೆ | ,, | ನೂರಕ್ಕೆ೩ |
| | (ಬ) ಇತರ ನಮೂನೆ | ,, | ನೂರಕ್ಕೆ೨ |
| ೪ | ಕಚ್ಚಾ ಉಣ್ಣೆ. | ,, | ನೂರಕ್ಕೆ೧ |
| ೫ | ಮೆಣಸಿನಕಾಯಿ. | ,, | ನೂರಕ್ಕೆ೨ |
| ೬ | ಲವಂಗ. | ,, | ನೂರಕ್ಕೆ೨ |
| ೭ | ಅಡಕೆ. | ,, | ನೂರಕ್ಕೆ೨ |
| ೮ | ಮೆಣಸು. | ,, | ನೂರಕ್ಕೆ೨ |
| ೯ | ವರ್ತಮಾನ ಪತ್ರದ ಕಾಗದ | ,, | ನೂರಕ್ಕೆ೩ |
| ೧೦ | ಬೀಡಿಯ ಎಲೆಗಳು | ,, | ನೂರಕ್ಕೆ೨ |

| ಣಿ ೨ | ಸರಕುಗಳ ವಿವರ | ಕರಬೀಳುವ ಸ್ಥಾನ | ಕರದ ದರ |
|---|---|---|---|
| ೧೧ | ಕಾಜೂ ಹಾಗೂ ಅದರಬೀಜ | ಈ ಕಾಯ್ದೆಯನ್ವಯ ಕರಕೊಡಲು ಹೊಣೆಯಾಗುವ ರಾಜ್ಯದೊಳಗಿನ ಕೊನೆಯ ವರ್ತಕನ ಖರೀದಿಯ ಮೇಲೆ. | ನೂರಕ್ಕೆ೨ |
| ೧೨ | ಖನಿಜಗಳು, ಮೆಂಗ್ಯಾನೀಜ ಕಬ್ಬಿಣ, ಕ್ರೋಮಾಯಿಟ್ ಹಾಗೂ ಕಾವೊಲಿನ್ ಅದಿರುಗಳು ಸಹಿತ. | ,, | ನೂರಕ್ಕೆ೩ |
| ೧೩ | ಎಲವುಗಳು ಹಾಗೂ ಕೊಂಬುಗಳು | ,, | ನೂರಕ್ಕೆ೨ |

# ಪರಿಶಿಷ್ಟ—೪

೫ (೪) ನೆಯ ಕಲಮಿನನ್ವಯ ರಾಜ್ಯದೊಳಗಿನ ವರ್ತಕನ ಮೇಲೆ ಕೊನೆಯ ಖರೀದಿಯ ಸಮಯಕ್ಕೆ ಒಂದೇ ಸ್ಥಾನದಲ್ಲಿ ಕರಬೀಳುವ ಪ್ರಸಿದ್ಧಿತ ಸರಕುಗಳು.

| ಅ.ನಂ. | ಸರಕುಗಳ ವಿವರ | ಕರದ ದರ |
|---|---|---|
| ೧. | ಪರಿಶುದ್ಧಗೊಳಿಸಿದ ಕಲ್ಲಿದ್ದಲಿ ಸಹಿತ ಎಲ್ಲ ಬಗೆಯ ಕಲ್ಲಿದ್ದಲಿ | ನೂರಕ್ಕೆ ೨ |
| ೨. | ಕಚ್ಚಾ ಇಲ್ಲವೆ ಹದಮಾಡಿದ ಚರ್ಮ ಹಾಗೂ ತೊಗಲು | ನೂರಕ್ಕೆ ೨ |
| ೩. | ಕಬ್ಬಿಣ ಹಾಗೂ ಉಕ್ಕು, ಅಂದರೆ— | ನೂರಕ್ಕೆ ೨ |
| | (a) ಮಿಶ್ರಿತ ಕಬ್ಬಿಣ ( pig iron ) ಹಾಗೂ ಕಬ್ಬಿಣದ ತುಂಡು ತುಣುಕುಗಳು. | |
| | (b) ಕುಲಿಮೆಯಲ್ಲಿ ಕಾಯಿಸಿ ಹೊಯ್ದು ತಯ್ಯಾರಿಸಿದ ಸ್ಥಿತಿಯಲ್ಲಿಯೇ ಇರುವ ಕಬ್ಬಿಣದ ತಗಡುಗಳು. | |
| | (c) ಉಕ್ಕಿನ ತುಣುಕು ತುಂಡುಗಳು, ಅಚ್ಚುಪಡಿಯಲ್ಲಿ ಹೊಯ್ದು ತಯ್ಯಾರಿಸಿದ ಉಕ್ಕಿನ ಹೆಂಟೆಗಳು ಹಾಗೂ ಉಕ್ಕಿನ ಪಟ್ಟಿಗಳು, ಹಾಗೂ ಉಕ್ಕಿನ ಸಳಾಯಿಗಳು. | |
| | (d) ಉಕ್ಕಿನ ಕಾರಖಾನೆಯ ಕುಲಿಮೆಯಲ್ಲಿ ಕಾಯಿಸಿ ಹೊಯ್ದು ತಯ್ಯಾರಿಸಿದ ಸ್ಥಿತಿಯಲ್ಲಿಯೇ ಮಾರಾಟವಾದ | |
| | (i) ಉಕ್ಕಿನ ತಗಡುಗಳು. | |
| | (ii) ಉಕ್ಕಿನ ಹಾಳೆಗಳು. | |
| | (iii) ಉಕ್ಕಿನ ಹಾಳೆಯ ಸಳಾಯಿ ಹಾಗೂ ತಗಡಿನ ಸಳಾಯಿ | |
| | (iv) ಅಚ್ಚಿನಲ್ಲಿ ಹೊಯ್ದು ಮಾಡಿದ ಉಕ್ಕಿನ ತೊಲೆಗಳು. | |
| | (v) ಉಪಕರಣ ಮಾಡಲು ಉಪಯೋಗಿಸುವ ಮಿಶ್ರಿತ ಉಕ್ಕು. | |

| ಅ.ನಂ. | ಸರಕುಗಳ ವಿವರ | ಕರದ ದರ |
|---|---|---|
| ೪. | ಬೇಲು ಕಟ್ಟಿದ ಇಲ್ಲವೆ ಹಾಗೆಯೇ ಇರುವ ಸಣಬು, ಅಂದರೆ ಪುಂಡಿ, ದೆವ್ವಾಳಿ ಮೊದಲಾದ ವನಸ್ಪತಿಗಳಿಂದ ತೆಗೆದ ನಾರು, | ನೂರಕ್ಕೆ ೨ |
| ೫. | ಎಣ್ಣೆಯ ಕಾಳುಗಳು, ಅಂದರೆ, ಮನುಷ್ಯನ ಸೇವನೆಗಾಗಿ ಉಪಯೋಗಿಸುವ, ಕಾರಖಾನೆಗಳಲ್ಲಿ ಉಪಯೋಗಿಸುವ, ಬಣ್ಣಗಳನ್ನು ಸಿದ್ಧಗೊಳಿಸಲು ಉಪಯೋಗಿಸುವ, ಯಂತ್ರದ ಸವಕಳಿ ತಗ್ಗಿಸಲು ಉಪಯೋಗಿಸುವ non volatile ಎಣ್ಣೆಯನ್ನು ಒದಗಿಸುವ ಕಾಳುಗಳು ಹಾಗೂ ಔಷಧ, ಸುಗಂಧ, ಶೃಂಗಾರ, ವರ್ಧಕ ವಸ್ತುಗಳನ್ನು ಸಿದ್ಧಗೊಳಿಸಲು ಉಪಯೋಗಿಸುವ volatile ಎಣ್ಣೆ ಒದಗಿಸುವ ಕಾಳುಗಳು. | |
| ೬. | ಅರಳೆ, ಅಂದರೆ, ಕಚ್ಚಾಸ್ಥಿತಿಯಲ್ಲಿದ್ದ ಎಲ್ಲ ಬಗೆಯ ಅರಳೆ (ದೇಶಿ ಇಲ್ಲವೆ ವಿದೇಶಿ) ಜೀನ ಆಗಿರಲಿ, ಆಗದೆ ಇರಲಿ, ಪ್ರೆಸ್ ಆಗಿರಲಿ ಆಗದೆ ಇರಲಿ, ಬೇಲು ಕಟ್ಟಿರಲಿ ಕಟ್ಟದೆ ಇರಲಿ, ಆದರೆ ಇದರಲ್ಲಿ ಉಪಯೋಗಿಸಿ ಒಗೆದ ಅರಳೆ ಅಡಕವಾಗುವುದಿಲ್ಲ. | ನೂರಕ್ಕೆ ೧ |
| ೭. | ಹತ್ತಿಯ ನೂಲು, (ಬಿಸಾಟಿದ ಹತ್ತಿಯ ನೂಲನ್ನು ಹೊರತುಪಡಿಸಿ). | |

## ಪರಿಶಿಷ್ಟ—೫

### ೮ ನೆಯ ಕಲಮಿನನ್ವಯ ಕರಮುಕ್ತ ಸರಕುಗಳು

೧. ಕುಂಕುಮ.

೨. ಕಾಜಿನ ಬಳೆಗಳು.

೩. ಮಂಗಳ ಸೂತ್ರಗಳು.

೪. ಉಪ್ಪು.

೫. ಬಟಾಟೆ, ಉರುಳೆಗಡ್ಡಿ, ಬೆಳ್ಳೊಳ್ಳಿ ಹಾಗೂ ಶುಂಠಿಗಳನ್ನು ಹೊರತುಪಡಿಸಿ ಇತರ ಹಸಿ ಇಲ್ಲವೆ ಒಣಗಿದ ತರಕಾರಿಗಳು.

೬. ತತ್ತಿ, ಮಾಂಸ ಹಾಗೂ ಮೀನ (ಆದರೆ ಡಬ್ಬಿಗಳಲ್ಲಿರುವ ಈ ವಸ್ತುಗಳು ಇದರಲ್ಲಿ ಅಡಕವಾಗುವುದಿಲ್ಲ)
೭. ತಾಜಾ ಹಾಲು ಮೊಸರು ಹಾಗೂ ಮಜ್ಜಿಗೆ
೮. ಕೈಮಗ್ಗದಮೇಲೆ ನೇಯ್ದ ಕಂಬಳಿಗಳು.
೯. ಹತ್ತಿಯ ಹಾಗೂ ಉಣ್ಣೆಯ ಕೈನೂಲು ಹಾಗೂ ಸಂಪೂರ್ಣ ಕೈನೂಲಿನಿಂದ ಕೈಮಗ್ಗದಲ್ಲಿ ನೇಯ್ದ ಖಾದಿಯ ಅರಿವೆ ಹಾಗೂ ಅಖಿಲಭಾರತ ಚರಖಾ ಸಂಘದಿಂದ ಸರ್ಟಿಫಿಕೇಟು ಪಡೆದು ಮಾರುವ ಅದರಿಂದ ತಯಾರಾದ ವಸ್ತುಗಳು.
೧೦. ಚರಖಾ ಹಾಗೂ ಅದರಬಿಡಿಭಾಗಗಳು.
೧೧, ಹೂವು ಹಾಗೂ ವೀಳ್ಯದ ಎಲೆಗಳು.
೧೨. ಸಸಿಗಳು.
೧೩. ಪಾರ್ಲಮೆಂಟ ಹಾಗೂ ರಾಜ್ಯದ ಶಾಸನ ಸಭೆಗಳ ಹಾಗೂ ಸ್ಥಾನಿಕ ಸಂಸ್ಥೆಗಳ ಚುನಾವಣೆಗೆ ಬೇಕಾಗುವ ಬ್ಯಾಲಟ್ ಪೆಟ್ಟಿಗೆಗಳು.
೧೪. ಕಮೀಶನರನಿಂದ ಮನ್ನಣೆ ಪಡೆದ ರಾಜ್ಯದ ಔದ್ಯೋಗಿಕ ಶಾಲೆಗಳಲ್ಲಿ ತರಬೇತಿ ಹೊಂದುವವರು ಹಾಗೂ ವಿದ್ಯಾರ್ಥಿಗಳು ತಯ್ಯಾರಿಸಿದ ವಸ್ತುಗಳ ಮೊದಲ ಮಾರಾಟ.
೧೫. ಲಾಯಸೆನ್ಸದಾರರಿಂದ ಮಾರಾಟವಾಗುವ ರೇಶಿಮೆಯ ಹುಳದ್ದ ತತ್ತಿಗಳು.
೧೬. ರೇಶಿಮೆಯ ಕುಕ್ಕಡಿ ಪಾಲನೆ ಮಾಡುವವರು ಮಾರುವ ರೇಶಿಮೆಯ ಹುಳದ ಕುಕ್ಕಡಿಗಳು.
೧೭. ಆಸ್ಪತ್ರೆಗಳಲ್ಲಿ ಡಾಕ್ಟರರು ರೋಗಿಗಳಿಗೆ ಕೊಡುವ ಔಷಧಿಗಳು.
೧೮. ರಾಜ್ಯ ಸರಕಾರದ ಮನ್ನಣೆ ಪಡೆದ ಔದ್ಯೋಗಿಕ ತರಬೇತಿ ಕೇಂದ್ರಗಳಲ್ಲಿ ಉಮೇದುವಾರರು ತಯ್ಯಾರಿಸಿದ ವಸ್ತುಗಳು ಮೊದಲನೇ ಮಾರಾಟ.
೧೯. ಕಮೀಶನರನಿಂದ ಮನ್ನಣೆ ಪಡೆದ ಕೈಯಿಂದ ಮಾಡಿದ ಕಾಗದ.
೨೦. ಸ್ಟಾಂಪ ಕಾಯ್ದೆಯನ್ವಯ ಸ್ಟಾಂಪ ಮಾರಾಟಗಾರರಿಂದ ಮಾರುವ ಸ್ಟಾಂಪಗಳು.
೨೧. ಸೋಡಾ ಇಲ್ಲವೆ ಖನಿಜದ ನೀರು ಬಿಟ್ಟು ಇತರ ನೀರು.
೨೨. ಆಹಾರ ಹಾಗೂ ಪಾನೀಯಗಳ ಮಾರಾಟ ಪುರವಠೆ ಇಲ್ಲವೆ ವಿತರಣೆ—

(i) ಕಮೀಶನರನಿಂದ ಮನ್ನಣೆ ಪಡೆದ ಶೈಕ್ಷಣಿಕ ಸಂಸ್ಥೆಗಳು ಕೇವಲ ತಮ್ಮ ಸಂಸ್ಥೆಯ ಸದಸ್ಯರಿಗೆ ಮಾರುವ ಕ್ಯಾಂಟೀನು ಇಲ್ಲವೆ ಹಾಸ್ಟೆಲ್ಲುಗಳಿಂದ ಪುರವಠೆ ಮಾಡುವ ಇಲ್ಲವೆ ವಿತರಣೆ ಮಾಡುವ ಆಹಾರ.

(ii) ಕಮೀಶನರನಿಂದ ಮನ್ನಣೆ ಪಡೆದ ದಾನಧರ್ಮದ ಸಂಸ್ಥೆಗಳು ನಡೆಯಿಸುವ ಹಾಸ್ಟೆಲ್ಲುಗಳಿಂದ ಕೇವಲ ತಮ್ಮ ವಿದ್ಯಾರ್ಥಿಗಳಿಗೆ ಮಾರುವ ಪುರವಠೆ ಮಾಡುವ ಇಲ್ಲವೆ ವಿತರಣೆ ಮಾಡುವ ಆಹಾರ.

೨೩. ಹಳ್ಳಿಗಾಡಿನ ಎತ್ತಿನ ಬಂಡಿಗಳು ಹಾಗೂ ಅವುಗಳ ಬಿಡಿಭಾಗಗಳು.

೨೪. ಗೃಹಕೈಗಾರಿಕೆಯಿಂದ ಸಿದ್ಧವಾದ ಒಕ್ಕಲುತನದ ಸಾಧನಗಳು.

೨೫. ಕಮೀಶನರನಿಂದ ಮನ್ನಣೆ ಪಡೆದ ಗ್ರಾಮೋದ್ಯೋಗದ ಸಹಕಾರಿ ಸಂಘದ ಸದಸ್ಯರಿಂದ ಉತ್ಪಾದಿತವಾದ ವಸ್ತುಗಳು.

೨೬. ತಾಳದ ಬೆಲ್ಲದ ವಸ್ತುಗಳು ಹಾಗೂ ತಾಳದ ಎಲೆಗಳಿಂದ ಮಾಡಿದ ಬುಟ್ಟಿ ಚಾಪೆ, ಬಾರಿಗೆ, ಪಂಖಾ ಮೊದಲಾದವು ರಾಜ್ಯದಲ್ಲಿಯ ಸಹಕಾರೀ ಸಂಘಗಳ ಮೂಲಕ ಮಾರಾಟವಾಗುವ ವಸ್ತುಗಳು.

೨೭. ಸರ್ವ ಸೇವಾ ಸಂಘ ಹಾಗೂ ಅದರ ಶಾಖೆಗಳು ಹಾಗೂ ಖಾದಿ ಹಾಗೂ ಗ್ರಾಮೋದ್ಯೋಗ ಸಂಸ್ಥೆಯವರ ನೂಲುವ ಹಾಗೂ ಇತರ ಉಪಕರಣಗಳ ಮಾರಾಟ.

೨೮. ಗ್ರಾಮೋದ್ಯೋಗದ ಉತ್ಪಾದನೆಯ ಮೊದಲನೇ ಸಲ ಮಾರಾಟವಾಗುವ ವಸ್ತುಗಳು.

೨೯. ಉರುವಲ ಇಲ್ಲವೆ ಇದ್ದಲಿ (ಮನೆತನದ ಬಳಕೆಗಾಗಿ ಮಾರಿದ್ದು).

೩೦. ಪಾಟಿ ಹಾಗೂ ಪಾಟಿಯ ಪೆನ್ಸಿಲ್ಲು.

೩೧ ಸಿಂದಿ

೩೨. ಮೋಟರ ಸ್ಪಿರಿಟ್‌ಗಳು.

೩೩. ಇಲೆಕ್ಟ್ರಿಕ್ ಎನರ್ಜಿ. (ವಿದ್ಯುಚ್ಛಕ್ತಿ)

ಸ್ಪಷ್ಟೀಕರಣ—೧.

ಅನುಕ್ರಮ ನಂಬರ ೨೮ ರಲ್ಲಿ ಕಾಣಿಸಿದ "ಗ್ರಾಮೋದ್ಯೋಗ" ಎಂದರೆ ಮೈಸೂರು ಖಾದಿ ಹಾಗೂ ಗ್ರಾಮೋದ್ಯೋಗ ಕಾಯ್ದೆ, ೧೯೫೬ ರಲ್ಲಿ ಖಾದಿ ವ್ಯಾಖ್ಯೆ ಕೊಡಲಾದ ಗ್ರಾಮೋದ್ಯೋಗ.

ಸ್ಪಷ್ಟೀಕರಣ—೨.

ಅನುಕ್ರಮ ನಂಬರ ೩೨ ರಲ್ಲಿ ಕಾಣಿಸಿದ "ಮೋಟರ ಸ್ಪಿರಿಟ್" ಎಂದರೆ ಮೈಸೂರು ಮೋಟರ್ ಸ್ಪಿರಿಟ್ ಮಾರಾಟ ಕರದ ಕಾಯ್ದೆ, ೧೯೫೭ ರಲ್ಲಿ ವ್ಯಾಖ್ಯೆ ಕೊಡಲಾದ ಮೋಟರ ಸ್ಪಿರಿಟ್."

ಸ್ಪಷ್ಟೀಕರಣ— ಈ ಸುಗ್ರೀವಾಜ್ಞೆಯನ್ವಯ ತಾ. ೧೪—೧೨—೧೯೫೭ ರಿಂದ ಬಳ್ಳೊಳ್ಳಿ, ಬೆಲ್ಲ, ಉಳ್ಳೆಗಡ್ಡಿ, ಬಟಾಟೆ, ದ್ವಿದಳ ಧಾನ್ಯ ಮತ್ತು ಅವುಗಳಿಂದ ತಯಾರಾದ ವಸ್ತುಗಳು, ಗೆಣಸು, ಅರಿಷಿಣ, ಇವುಗಳ ಮೇಲೆ ೧೦೦ ಕ್ಕೆ ೨ರಂತೆ ಇದ್ದ ಬಹುಮುಖಿ ವಿಕ್ರಿಕರವನ್ನು ಶೇಕಡಾ ೧ ಕ್ಕೆ ಇಳಿಸಲಾಗಿದೆ.

# ನಮೂನೆ ೧೪.

## ಬಿಲ್ ಆಫ್ ಲೇಡಿಂಗ.

( ನಿಯಮ ೨೭ (೧) ನ್ನು ನೋಡಿರಿ. )

೧. ಸರಕು ಒಪ್ಪಿಸಿ ಕೊಡುವವನ ಹೆಸರು ಮತ್ತು ಪೂರ್ಣ ವಿಳಾಸ .... .... .... ...

೨. ಮೈಸೂರು ಮೋಟಾರ ಕರ ಕಾಯ್ದೆ, ೧೯೫೭ ರನ್ವಯ ಸರಕು ಒಪ್ಪಿಸಿ ಕೊಡುವವನು ಪಡೆದುಕೊಂಡ ನೋಂದಣಿಯದಾಖಲೆ ಯಿದ್ದರೆ ಅದರ ನಂಬರು .... .... .... ....

೩. ಸರಕು ಪಡೆದುಕೊಳ್ಳುವವನ ಹೆಸರು ಮತ್ತು ಪೂರ್ಣ ವಿಳಾಸ .... .... .... ....

೪. ಮೈಸೂರು ಮೋಟಾರ ಕರ ಕಾಯ್ದೆ, ೧೯೫೭ ರನ್ವಯ ಸರಕು ಪಡೆದುಕೊಳ್ಳುವವನ ನೋಂದಣಿ ದಾಖಲೆ ಯಿದ್ದರೆ ಅದರ ನಂಬರು .... .... .... ...

೫. ಸರಕುಗಳು ಹೋಗಿ ಮುಟ್ಟತಕ್ಕ ಸ್ಥಳ .... ... ....

೬. ಸರಕುಗಳ ವಿವರ .... .... .... ...

೭. ಸರಕುಗಳ ಕ್ರಯ .... .... ... ....

೮. ಸರಕುಗಳು ಯಾರ ವಶದಲ್ಲಿಯಾದರೂ ಇದ್ದರೆ ಅಂಥವನ ಹೆಸರು ಮತ್ತು ವಿಳಾಸ .... .... ... ....

೯. ಸಾಗಾಟದ ವಾಹನವನ್ನು ನಡಿಸುವ, ಇಲ್ಲವೆ ಸಾಗಾಟದ ಪ್ರಾಣಿಯು ಇಲ್ಲವೆ ಅಂಥ ವಾಹಕವು ಯಾರ ವಶದಲ್ಲಿರುವದೋ ಅವನ ಹೆಸರು ಮತ್ತು ವಿಳಾಸ ... .... ....

೧೦. ವಾಹನದ ನಂಬರು ಇದ್ದರೆ ಆ ನಂಬರು .... .... ....

೧೧. ಸರಕುಗಳ ಮಾಲಕನ ಹೆಸರು .... .... ....

ಸರಕುಗಳನ್ನು ಸಾಗಿಸುವವನ ಸಹಿ
ಅಥವಾ ಎಡಗೈ ಹೆಬ್ಬಟ್ಟಿನ ಗುರುತು .... ....

---

**ಟಿಪ್ಪಣಿ:—** (೧) 'ಬಿಲ್ ಆಫ್ ಲೇಡಿಂಗ'ದ ಪ್ರತಿಯು ಸರಕುಗಳನ್ನು ಒಯ್ಯುವವನ ಬಳಿಯಲ್ಲಿ ಇರತಕ್ಕದ್ದು.

(೨) ಸರಕುಗಳನ್ನು ಒಯ್ಯುವವನ ಎಡಗೈ ಹೆಬ್ಬೆರಳಿನ ಗುರುತನ್ನು ತೆಗೆದುಕೊಂಡ ಪಕ್ಷದಲ್ಲಿ ವಿಕ್ರಿದಾರ ಇಲ್ಲವೆ ಅವನ ಏಜಂಟ ಅಥವಾ ಮ್ಯಾನೇಜರನಿಂದ ಅದು ಪ್ರಮಾಣಿಸಲ್ಪಟ್ಟಿರಬೇಕು.

# ನಮೂನೆ ೪.

## ವ್ಯವಹಾರದ, ಅಂದಾಜು ಮಾಡಿದ ವ್ಯವಹಾರದ ಲೆಕ್ಕಪತ್ರಿಕೆ.

( ಅಧಿನಿಯಮಗಳ ೧೩ (೧), (೨) ಮತ್ತು (೩), ೧೮ (೧), ೨೧ (೨)
ಮತ್ತು (೫) ಮತ್ತು ೭ (೨) ನೇ ನಿಯಮಗಳನ್ನು ನೋಡಿರಿ. )

೧. ................ರಿಂದ................ವರೆಗಿನ ಅವಧಿಯ ಲೆಕ್ಕಪತ್ರಿಕೆಯು.

೨. ನೋಂದಣಿ ದಾಖಲೆಯ ನಂಬರು........... ...

೩. ವ್ಯಾಪಾರಸ್ಥನ ಹೆಸರು ಮತ್ತು ವಿಳಾಸ ... .... ..
.... .... .... .... ..

೪. ಸಂಬಂಧ .... .... .... ..
( ವ್ಯಕ್ತಿ, ಹಿಂದು ಅವಿಭಕ್ತ ಕುಟುಂಬ, ಸಂಸ್ಥೆ, ಕ್ಲಬ್, ಫರ್ಮ್, ಕಂಪನಿ, ರಕ್ಷಣಾಕರ್ತ ಇಲ್ಲವೆ ವಿಶ್ವಸ್ತ ಇತ್ಯಾದಿ )

೫. ವ್ಯವಹಾರದ ನಾಮೆ .... ... ... ...
ರೂ. ನ. ಪೈ.

೬. ವ್ಯವಹಾರದ ಒಟ್ಟು ಮೊತ್ತ.

೭. ವಜಾ :– ರೂ. ನ. ಪೈ.

(i) ವ್ಯವಹಾರದ ಸಾಮಾನ್ಯ
ರೂಢಿಯಂತೆ ಕೊಟ್ಟ ವಟಾವು

(ii) ಗ್ರಾಹಕರಿಂದ ವಾಪಸ್ಸ ಮಾಡ
ಲ್ಪಟ್ಟ ಸರಕುಗಳ ದೆಶೆಯಿಂದ
ಮರಳಿ ಕೊಟ್ಟ ರಕಮು : ....

(iii) ಗಿರಾಕಿಗಳ ಅನುಕೂಲತೆಗಾಗಿ
ಬೇರೆ ವ್ಯಾಪಾರಸ್ಥನಿಂದ ತಂದು,
ಅದೇ ಬೆಲೆಗೆ ಆಗಲೇ ಮಾರಿದ
ಸರಕುಗಳ ಒಟ್ಟು ಮೊತ್ತ ....

(iv) ಬಿಲ್ಲಿನಲ್ಲಿ ಪ್ರತ್ಯೇಕವಾಗಿ ತೋರಿ
ಸಲ್ಪಟ್ಟ ಫ್ರೇಟ, ಪ್ಯಾಕಿಂಗ

ಹಾಗು ಡಿಲಿವರಿ ಇತ್ಯಾದಿ
ಕೆಲಸಗಳಿಗಾಗಿ ಕೊಟ್ಟ ಭಾಡಿ
ಗೆಯ ರಕಮು : ...

(v) ಸಂಪೂರ್ಣ ವ್ಯವಹಾರವನ್ನು
ವರ್ಗಾಯಿಸಿದಾಗ ಬಂದ ಬೆಲೆ:

(vi) ಈ ಕಾಯ್ದೆಯನ್ವಯ ವಸೂ
ಲು ಮಾಡಿದ ಕರ ಅಥವಾ ಕರ
ಗಳ ಪೂರಾ ರಕಮು : ....

(i) ರಿಂದ (vi) ರ ವರೆಗಿನ
ಒಟ್ಟು ರಕಮು :

ಕ. ನಿಕ್ಕಿ ವ್ಯವಹಾರದ ಮೊತ್ತವು
('ಅ' ದಿಂದ 'ಬ' ವಜಾ ತೆಗೆದು):

ಡ. ಈ ಕಾಯ್ದೆಯನ್ವಯ ಕರಕ್ಕೆ
ಪಾತ್ರವಿಲ್ಲದ ( ಬಿನ್ ಟ್ಯಾಕ್ಸ )
ಪ್ರತಿಯೊಂದು ವರ್ಗದ ಸರಕುಗಳ
ವ್ಯವಹಾರದ ರಕಮು ವಜಾ

(i)

(ii)

(iii)

(iv)

(v)

(vi) ಇತ್ಯಾದಿ.

'ಡ' ದ ಕಲಮುಗಳ ಒಟ್ಟು
ಮೊತ್ತ ....

ಇ. ಕರಕ್ಕೆ ಪಾತ್ರವಾದ ವ್ಯವಹಾರ ( 'ಕ' ದಿಂದ 'ಡ'
ವಜಾ ತೆಗೆದು ) :– ....

ಘ. ಕರಕ್ಕೆ ಪಾತ್ರವಾದ ವ್ಯವಹಾರದ ವರ್ಗೀಕರಣ:

| ಕೊಡತಕ್ಕ ಕರದ ದರ. | ಕಾಯ್ದೆಯ ಕಲಮು ೫ (೧) ರನ್ವಯ ಕರಕ್ಕೆ ಪಾತ್ರವಾದ ಸರಕುಗಳ ವ್ಯವಹಾರ | ಕಾಯ್ದೆಯ ಕಲಮು ೫ (೨) ರನ್ವಯ ಹೆಚ್ಚಿನ ಕರಕ್ಕೆ ಪಾತ್ರವಾದ ಸರಕುಗಳ ವ್ಯವಹಾರ. | ಮೊದಲನೆಯ ಹಂತದಲ್ಲಿ ಕರಕ್ಕೆ ಪಾತ್ರವಾದ ಸರಕುಗಳ ವ್ಯವಹಾರ. | | |
|---|---|---|---|---|---|
| | | | ಕಲಮು ೫ (೩) ರನ್ವಯ. | ಕಲಮು ೫ (೪) ರನ್ವಯ. | ಕಲಮು ೬ ರನ್ವಯ. |
| | ರೂ. ನ.ಪೈ | ರೂ. ನ.ಪೈ. | ರೂ. ನ.ಪೈ. | ರೂ. ನ.ಪೈ. | ರೂ. ನ.ಪೈ. |
| (i) ನೂರಕ್ಕೆ $\frac{1}{4}$ ರಂತೆ | | | | | |
| (ii) ,, $\frac{3}{4}$ ರಂತೆ | | | | | |
| (iii) ,, ೧ ರಂತೆ | | | | | |
| (iv) ,, ೨ ರಂತೆ | | | | | |
| (v) ,, ೩ ರಂತೆ | | | | | |
| (vi) ,, ೪ ರಂತೆ | | | | | |
| (vii) ,, ೫ ರಂತೆ | | | | | |
| (viii) ,, ೬ ರಂತೆ | | | | | |
| (ix) ,, ೭ ರಂತೆ | | | | | |
| (x) ,, ೯ ರಂತೆ | | | | | |
| (xi) ,, ೧೦ ರಂತೆ | | | | | |
| (xii) ,, ೨೦ ರಂತೆ | | | | | |
| (xiii) ,, ೨೫ ರಂತೆ | | | | | |
| (xiv) ,, ೩೦ ರಂತೆ | | | | | |

ರೂ ನ.ಪೈ.

ಗ. ವಸೂಲು ಮಾಡಿದ ಒಟ್ಟು ಕರದ ರಕಮು .... ....

ಹ. ಕೊಡಬೇಕಾದ ಒಟ್ಟು ಕರ .... .... ....

ಈ. ಕೊಟ್ಟ ಕರ (ತುಂಬಿದ ವಿವರವನ್ನು ತೋರಿಸತಕ್ಕದ್ದು) ....

ಜ. ಬಾಕಿ ಉಳಿದ ಇಲ್ಲವೆ ಹೆಚ್ಚು ತುಂಬಿದ ರಕಮು .... ....

ಮೇಲ್ಕಾಣಿಸಿದ ಪತ್ರಿಕೆಯಲ್ಲಿಯ ವಿವರವು ನನ್ನ ತಿಳುವಳಿಕೆಯ ಮತ್ತು ನಂಬಿಗೆಯ ಮಟ್ಟಿಗೆ ನಿಜವಿರುತ್ತದೆ ಮತ್ತು ಪೂರ್ಣ ವಿರುತ್ತದೆ, ಹಾಗೂ ಅದು..................ರಿಂದ.............. ವರೆಗಿನ ಅವಧಿಗೆ ಸಂಬಂಧಿಸಿದ್ದಿರುತ್ತದೆ ಎಂದು ನಾನು ಪ್ರಮಾಣಪೂರ್ವಕವಾಗಿ ಹೇಳುತ್ತೇನೆ.

ಸಹಿ..........................................................

ಮಾಲಕ/ಭಾಗೀದಾರ/ ಡಾಯರೆಕ್ಟರ/ ಮ್ಯಾನೇಜರ.

....................................

..............................ವತಿಯಿಂದ.

**ಟಿಪ್ಪಣಿ :—** ಅನ್ವಯಿಸದಿದ್ದುದನ್ನು ಕಾಟು ಹಾಕಿರಿ.

# ನಮೂನೆ ೧೩.

ಮೈಸೂರು ಪಾರಾಟಕರ ಕಾಯ್ದೆಯ ಕಲಮು ೬ ಮತ್ತು / ಅಥವಾ ೧೧ ರನ್ವಯ ಲಾಯಸನ್ಸು ಪಡೆದ ಲಾಯಸನ್ಸದಾರರು ಕಳಿಸತಕ್ಕ ವಾರ್ಷಿಕ ಲೆಕ್ಕಪತ್ರಿಕೆ.

( ನಿಯಮ ೭ (೨) ಮತ್ತು ೨೫ (೯) ನ್ನು ನೋಡಿರಿ. )

ಲಾಯಸನ್ಸದಾರನ (ರ) ಹೆಸರು (ಗಳು) .... ....

ಲಾಯಸನ್ಸ ನಂಬರು.... .... ತಾರೀಖು .... ....

ತಾ. .... .... ಕ್ಕೆ ಕೊನೆಗೊಂಡ ವರ್ಷದಲ್ಲಿ ನನ್ನ/ನಮ್ಮ ವ್ಯವಹಾರವು.

ರೂ. ನ.ಪೈಸೆ

**ಲಾಯಸನ್ಸಿನಲ್ಲಿ ನಮೂದಿಸಿದ ಬಾಬ್ತು ವ್ಯವಹಾರಗಳು :-**

(೧) ಬೆಳ್ಳಿ-ಬಂಗಾರದ ಗಟ್ಟಿ ಮತ್ತು/ಇಲ್ಲವೆ ನಾಣ್ಯ ....

(೨) ಕೈಮಗ್ಗದಲ್ಲಿ ತಯಾರಾದ ಬಟ್ಟೆಗಳು ....

(೩) ಕಚ್ಚಾ ರೇಶಿಮೆ .... ....

(೪) ಗೋದಿ (ಆಟ್ಟಾ, ಮೈದಾ, ಸುಜಿ ಮತ್ತು ಬ್ರ್ಯಾನ್ ಸಹಿತ) ಬ್ರೆಡ್, ಭತ್ತ, ಅಕ್ಕಿ ( ಚುರಮುರಿ, ಅವಲಕ್ಕಿ ಸಹಿತ), ರಾಗಿ, ಜೋಳ, ಗೋವಿನಜೋಳ, ಬಾಜರಿ, (ಸಜ್ಜೆ ) ನವಣೆ ಮತ್ತು ಸಾವೆ ...

(೫) [ಅ] ಮೋಟರಕಾರು, ಮೋಟರ ಟ್ಯಾಕ್ಸಿಕ್ಯಾಬ್, ಮೋಟರ ಸೈಕಲು ಮತ್ತು ಸೈಕಲ ಜೋಡಣೆಗಳು, ಮೋಟರ ಸ್ಕೂಟರು, ಸಣ್ಣ ಮೋಟರ ಬಸ್ಸು, ಮೋಟರ ಬಸ್ಸು, ಮೋಟರವ್ಯಾನ್ ಮತ್ತು ಮೋಟರ ಲಾರಿ ಇವುಗಳ ನ್ನೊಳಗೊಂಡು ಎಲ್ಲ ತರದ ಮೋಟರ ವಾಹನಗಳು....

[ಬ] ಮೋಟರ ವಾಹನಗಳ ಚೆಸ್ಸಿಗಳು ....

[ಕ] ಮೋಟರ ವಾಹನಗಳ ಬಿಡಿಭಾಗಗಳು ...

ರೂ. ನ ಪೈಸೆ

[ಡ] ಮೋಟರ ವಾಹನಗಳ ಭಾಗಗಳಂತೆ ಮತ್ತು ಬಿಡಿಭಾಗಗಳಂತೆ ಉಪಯೋಗಿಸಲ್ಪಡುವ ಅಥವಾ ಭಾಗಗಳಂತೆ ಮತ್ತು ಬಿಡಿಭಾಗಗಳಂತೆ ಉಪಯೋಗಿಸಲ್ಪಡದೆ ಬೇರೆ ವಿಧವಾಗಿ ಉಪಯೋಗಿಸಲ್ಪಡುವ ವಸ್ತುಗಳು (ರಬ್ಬರ ಅಥವಾ ಬೇರೆ ಟಾಯರುಗಳು, ಟ್ಯೂಬುಗಳು ಮತ್ತು ಬ್ಯಾಟರಿಗಳು ಸಹಿತ).

(೬) ಪರಿಚಿತನಾದ ಮಾಲಿಕನ ವತಿಯಿಂದ ನಿರ್ಧರಿತವಾದ ಕಮಿಶನ್ ಅಥವಾ/ಮತ್ತು ಬ್ರೋಕರೇಜಿನ ಮೇಲೆ ಮಾಡಿದ ಯಾವದೇ ಸರಕುಗಳ ಖರೀದಿ ಅಥವಾ/ಮತ್ತು ವಿಕ್ರಿ ...

ಮೇಲ್ಕಾಣಿಸಿದ ಪತ್ರಿಕೆಯಲ್ಲಿಯ ವಿವರವು ನನ್ನ / ನಮ್ಮ ತಿಳುವಳಿಕೆಯ ಹಾಗೂ ನಂಬಿಗೆಯ ಮಟ್ಟಿಗೆ ಸರಿಯಾಗಿದೆ ಹಾಗೂ ಪೂರ್ಣವಾಗಿದೆ ಮತ್ತು ಅದು ತಾ........ ................ಕ್ಕೆ ಕೊನೆಗೊಂಡ ವರ್ಷಕ್ಕೆ ಸಂಬಂಧಿಸಿದೆಯೆಂದು ನಾನು/ನಾವು ಪ್ರಮಾಣಪೂರ್ವಕವಾಗಿ ಹೇಳುತ್ತೇನೆ/ಹೇಳುತ್ತೇವೆ.

ಲಾಯಸನ್ಸುದಾರನ (ರ) ಸಹಿ .... ....

ಲಾಯಸನ್ಸುದಾರನ ಸಂಬಂಧದ ನಾತೆ

**ಟಿಪ್ಪಣಿ:—** ೧. ವ್ಯವಹಾರದ ಸ್ಥಳದ ವ್ಯವಹಾರದ ಮೊತ್ತವು ಲಾಯಸನ್ಸಿನಲ್ಲಿ ನಮೂದಿಸಲ್ಪಟ್ಟ ಶಾಖೆಗಳೇನಾದರೂ ಇದ್ದರೆ ಅಲ್ಲಿಯ ವ್ಯವಹಾರವನ್ನೂ ಒಳಗೊಂಡಿರಬೇಕು.

೨ ಅನ್ವಯಿಸದಿದ್ದುದನ್ನು ಕಾಟು ಹಾಕಿರಿ.

# ನಮೂನೆ ೩೨

ಪರಿಶಿಷ್ಟ ೧, ೨, ೩, ಮತ್ತು ೪ ರಲ್ಲಿ ನಮೂದಿಸಲಾದ ಸರಕುಗಳ ವ್ಯವಹಾರ ಮಾಡುವ ವ್ಯಾಪಾರಸ್ಥನು ಪೂರೈಸಬೇಕಾದ ದಾಖಲೆ

(ನಿಯಮ ೨೬ (೬) ನ್ನು ನೋಡಿರಿ )

೧. ನಾನು/ನಾವು ................( ಪೂರ್ಣ ವಿಳಾಸ )................ ....................ಈ ಸರಕುಗಳ ವ್ಯವಹಾರ ಮಾಡುವವರು,................ ( ಅಳತೆ )........( ಸರಕುಗಳು )........ಈ ಸರಕುಗಳನ್ನು ರೂ ..... ( ಬೆಲೆ ) ಗೆ,........ಇವರಿಂದ/ಇವರಿಗೆ ನಮ್ಮ/ಅವರ ಬಿಲ್ ಆಫ್ ಲೇಡಿಂಗ ನಂಬರ........ತಾರೀಖು................ರಲ್ಲಿ ನಮೂದಿಸಿದಂತೆ ಕೊಂಡಿರುತ್ತೇನೆ/ವೆ ವಿಕ್ರಿ ಮಾಡಿರುತ್ತೇನೆ/ವೆ.

೨. ನಾನು/ನಾವು..........ಈ ರಾಜ್ಯದಲ್ಲಿಯ ವ್ಯಾಪಾರಸ್ಥರಿದ್ದು ಮೈಸೂರು ಮಾರಾಟಕರ ಕಾಯ್ದೆ, ೧೯೫೭ ರನ್ವಯ ಕರ ಕೊಡಲು ಪಾತ್ರರಿರುತ್ತೇನೆ (ವೆ), ಮತ್ತು ಮೇಲ್ಕಾಣಿಸಿದ ಖರೀದಿ/ವಿಕ್ರಿಯ ಮೇಲೆ ನಾನು/ನಾವು ಕರ ಕೊಡುತ್ತೇನೆ (ವೆ).

ಅಥವಾ

ಈ ರಾಜ್ಯದಲ್ಲಿಯ ವ್ಯಾಪಾರಸ್ಥರಾದ........(ಪೂರ್ಣ ವಿಳಾಸ) ಇವರಲ್ಲಿ ಅವರ ಸೇಲ ಬಿಲ್/ಬಿಲ್ ಅಫ ಲೇಡಿಂಗ ನಂಬರ........ತಾರೀಖು .........ನ ಪ್ರಕಾರ ರೂ.........(ಬೆಲೆ) ಗೆ ಕೊಂಡ ಮೇಲ್ಕಾಣಿಸಿದ ಸರಕುಗಳು ಸದರಿಯವರಲ್ಲಿ ಈ ಮೊದಲೇ ಕರಕ್ಕೆ ಒಳಗಾಗಿರುತ್ತವೆ.

೩. ನನ್ನ /ನಮ್ಮ ನೋಂದಣಿಯ ದಾಖಲೆಯ ನಂಬರ......... ಇರುತ್ತದೆ. ಮತ್ತು ಕರಾಕರಣೆಯ ನಂಬರು........ಇರುತ್ತದೆ.

ನಾನು/ನಾವು, ಅಸಿಸ್ಟಂಟ ಕಮರ್ಶಿಯಲ್ ಟ್ಯಾಕ್ಸ ಆಫೀಸರ/ಕಮರ್ಶಿಯಲ್ ಟ್ಯಾಕ್ಸ ಆಫೀಸರ,...........(ಸ್ಥಳ) ಇವರ ರಜಿಸ್ಟರಿನಲ್ಲಿ ದಾಖಲೆ ಮಾಡಲ್ಪಟ್ಟಿದ್ದೇ ನೆ/ವೆ.

ಸ್ಥಳ..........                ...............

ತಾರೀಖು..........                ಸಹಿ: ಮತ್ತು ಮಾರಾಟಮಾಡುವನ ಹಾಗೂ ಸಹಿ ಮಾಡುವವನ ಸಂಬಂಧ.

---

**ಟೀಪು.೬**—(೧) ಅನ್ವಯಿಸದಿದ್ದುದನ್ನು ಕಾಟುಹಾಕಿರಿ.

(೨) ಪ್ಯಾರಾ ನಂ. ೨ ರಲ್ಲಿ ಈ ರಾಜ್ಯದಲ್ಲಿಯ ಮೊದಲನೇ, ೨ ನೇ ಅಥವಾ ೩ ನೇ ವಿಕ್ರಿದಾರನೋ ಅಥವಾ ಖರೀದಿದಾರನೋ ಎಂಬುದನ್ನು ಬರೆಯತಕ್ಕದ್ದು.

# ತಪ್ಪು ಒಪ್ಪೋಲೆ.

| ಪುಟ. | ಸಾಲು. | ತಪ್ಪು. | ಒಪ್ಪು. |
| --- | --- | --- | --- |
| ೨ | ೧೯ | ಸ್ವಂತ ನಾತೆಯಿಂವಾಗಲಿ. | ಸ್ವಂತ ನಾತೆಯಿಂದಾಗಲಿ ಅಥವಾ ಏಜಂಟ ನಾತೆಯಿಂದಾಗಲಿ. |
| ೩೬ | ೧೮ | ನೂರಕ್ಕೆ ೪ | ( ಹೆಚ್ಚಿಗೆ ಬಿದ್ದಿದೆ ಬಿಟ್ಟು ಓದಬೇಕು. ) |
| ೩೮ | ೮ | ನೂರಕ್ಕೆ ೪ | ನೂರಕ್ಕೆ ೩. |
| ೩೯ | ೪ | ನೂರಕ್ಕೆ ೪ | ನೂರಕ್ಕೆ ೭. |
| ೪೫ | ೧೨ | — | ( ಕರದ ದರ ನೂರಕ್ಕೆ ೨ ರಂತೆ ) |
| ,, | ೧೯ | — | ( ಕರದ ದರ ನೂರಕ್ಕೆ ೩/೪ ರಂತೆ ) |
| ೫೪ | ೪ | ವಸ್ತುಗಳು | ವಸ್ತುಗಳನ್ನು ಬಿಟ್ಟು. |

